ನಾಲ್ವತ್ತೊಂದನೆಯ

## ಕನ್ನಡ ಸಾಹಿತ್ಯ ಸಮ್ಮೇಳನ

ಗದಗು

### ಕವಿಗೋಷ್ಠಿಯ ಅಧ್ಯಕ್ಷ ಭಾಷಣ

# ಕನ್ನಡ ಕಾವ್ಯದ ಹೊಸ ಬದುಕು



ಚೆನ್ನವೀರ ಕಣವಿ

೨೮-೧೨-೧೯೬೦

> “Let the mind be a thoroughfare for
> all thoughts, not a select party”
>
> — Keats

## ೧

**ಕನ್ನಡ ನಾಡಿನ ಕಾವ್ಯಪ್ರೇಮಿಗಳೆ, ಕುಲರಸಿಕರೆ,**

ನನಗಿಂತಲೂ ಹಿರಿಯರಾದವರು, ಕಾವ್ಯಪ್ರಯೋಗಪರಿಣತಮತಿಗಳು, ಈ ಕವಿಗೋಷ್ಠಿಯ ಅಧ್ಯಕ್ಷಪದವನ್ನು ಅಲಂಕರಿಸಿದ್ದರೆ ನನಗೆ ಇನ್ನೂ ಹೆಚ್ಚಿನ ಸಂತೋಷವಾಗುತ್ತಿತ್ತು. ನಿಮ್ಮೆಲ್ಲರ ಪ್ರೀತಿ ವಿಶ್ವಾಸಗಳಿಗೆ ಎರಡು ಬಗೆಯದೆ, ನನ್ನ ಯೋಗ್ಯತೆಗೆ ಮೀರಿದ ಈ ಕಾರ್ಯಕ್ಕೆ ಅತ್ಯಂತ ನಮ್ರತೆಯಿಂದ ಅಣಿಯಾಗಿ ತಮ್ಮೆದುರು ನಿಂತಿದ್ದೇನೆ. ಸಹೃದಯರಾದ ತಾವೆಲ್ಲರೂ ‘ಎನಗೆ ನೆರವಕ್ಕೆ, ನಡಸುಗೆ, ರಸಂಗೊಡುಗೆ, ತಿದ್ದುಗೆ ಸುನಿರ್ವಿಘ್ನದಿಂದ’ ಎಂದು ಕೋರುತ್ತೇನೆ.

ನಾನು ಇದೇ ತಾಲೂಕಿನ ಹಳ್ಳಿಯೊಂದರಲ್ಲಿ ಹುಟ್ಟಿ ನನ್ನ ಬಾಲ್ಯವನ್ನು ಕಳೆದಿರುವದು ನಿಮ್ಮ ಅಭಿಮಾನಕ್ಕೆ ಒಂದು ಕಾರಣವಾಗಿರಬಹುದಾಗಿ ಭಾವಿಸುತ್ತೇನೆ. ನನ್ನ ಕಾವ್ಯಜೀವನದ ಪ್ರಾರಂಭದ ರಸಸಂಸ್ಕಾರವನ್ನೂ, ಸ್ಫೂರ್ತಿಯನ್ನೂ ಇಲ್ಲಿಯ ವಾತಾವರಣದಲ್ಲಿ ಪಡೆದ ಧನ್ಯತೆ ನನ್ನದಾಗಿದೆ. ‘ಭಾವಜೀವಿ’ ಯಲ್ಲಿ ಒಡಮೂಡಿರುವ ಹಳ್ಳಿಯ ಬಾಳಿನ ಚಿತ್ರಣ ಈ ನಾಡಿನ, ನುಡಿಯ, ಪ್ರಸಾದ. ಚಾಮರಸ, ಕುಮಾರವ್ಯಾಸ ಮಹಾಕವಿಗಳ ಭಕುತಿಯ ಭಾವರಸದಲ್ಲಿ ಮಿಂದು, ಬಲುಹಿನ ಅಗ್ಗಳಿಕೆಯಲ್ಲಿ ತಲೆಯೆತ್ತಿ ನಿಂತಿದೆ ಇಲ್ಲಿಯ ಭಾಷೆ. ಈ ಬೆಳುವೊಲದ ತಿರುಳ್ಗನ್ನಡದ ಬಗ್ಗೆ ನನಗಿರುವ ಅಭಿಮಾನದಲ್ಲಿ ನೀವೂ ಪಾಲುಗಾರರು ಎಂದು ಭಾವಿಸಿ ಮುಂದೆ ಸಾಗುತ್ತೇನೆ.

೧

ನಮ್ಮ ಪುರಾತನ ಕಾವ್ಯದ ಭವ್ಯ ಪರಂಪರೆಯನ್ನೂ, ನಮ್ಮ ಹಿಂದಿನ ಕವಿಗಳ ಹಿರಿಮೆ - ಗರಿಮೆಗಳನ್ನೂ ಕುರಿತು ಈ ಹಿಂದೆ ಅನೇಕರು, ಅನೇಕ ಸಲ, ಇಂಥ ಗೋಷ್ಠಿಗಳಲ್ಲಿ ಸಮರ್ಥ ರೀತಿಯಿಂದ ಪ್ರತಿಪಾದಿಸಿ ನಮ್ಮನ್ನು ಸಂತುಷ್ಟಿಗೊಳಿಸಿದ್ದಾರೆ. ಅಲ್ಲದೆ. ಆಧುನಿಕ ಕನ್ನಡ ಕಾವ್ಯದ ಗೊತ್ತು - ಗುರಿಗಳನ್ನೂ ಒಲವು-ನಿಲವುಗಳನ್ನೂ ಕಂಡುಹಿಡಿಯಲು ಸಾಧ್ಯವಿದ್ದಷ್ಟು ಪ್ರಯತ್ನಿಸಿದ್ದಾರೆ. ಆದುದರಿಂದ ನಾನು ಪುನಃ ಆ ಕಾರ್ಯಕ್ಕೆ ತೊಡಗದೆ, ಹೊಸಗನ್ನಡ ಕಾವ್ಯದಲ್ಲಿ ಹೊಸ ಬದುಕಿನ ನಿರ್ಮಾಣ ಇತ್ತೀಚೆಗೆ ನಡೆದಿರುವ ರೀತಿಯನ್ನು ಕುರಿತು ನನಗೆ ಕಂಡು ಬಂದಿರುವ ನಾಲ್ಕು ಮಾತುಗಳನ್ನು ತಮ್ಮೆದುರು ಇಡುತ್ತಿದ್ದೇನೆ. ' ತಂ ಸಂತಃ ಶ್ರೋತುಮರ್ಹಂತಿ ಸದಸದ್ವ್ಯಕ್ತಿ ಹೇತವಃ '

೨

ಕವಿ ತನ್ನ ಕಾವ್ಯದಲ್ಲಿ ಹೊಸತಾದುದನ್ನು ಹೇಳಲು, ಹೊಸ ಹೊಸ ಅನುಭವವನ್ನು ಹೊಸರೀತಿಯಲ್ಲಿ ಚಿತ್ರಿಸಲು, ಪ್ರಯತ್ನಿಸುವದು ಅವನ ಕಾವ್ಯಶಕ್ತಿಯ ಬೆಳವಣಿಗೆಯ ಕುರುಹು. 'The poetry of earth is never dead' ( Keats ) ಎಂಬ ಮಾತೇನೊ ನಿಜ; ಆದರೆ, ಆ ಕಾವ್ಯನಿಧಿಯ ಹೊಸ ಹೊಸ ಸರಕನ್ನು ಹೊರದೆಗೆದು ತೋರುವ ಭಾರ ಆಯಾ ಕವಿಯ ಕಾವ್ಯಶಕ್ತಿಯನ್ನೇ ಅವಲಂಬಿಸಿದೆ. ನಮಗೆ ಗೊತ್ತಿರುವ ಶಬ್ದಗಳೇ, ನಾವು ಆಡುವ ಮಾತುಗಳೇ ಎಲ್ಲ ಕವಿಗಳ ಕಾವ್ಯ ಮಾಧ್ಯಮವಾಗಿದ್ದರೂ, ನಾವು ಕಾಣುವ ನೋಟಗಳನ್ನೇ, ನಾವು ಪಡೆಯುವ ಅನುಭವಗಳನ್ನೇ ಕವಿಗಳು ತಮ್ಮ ಕಾವ್ಯದಲ್ಲಿ ಚಿತ್ರಿಸಿದರೂ, ಒಬ್ಬೊಬ್ಬರ ಕವಿತೆಯೂ ಒಂದೊಂದು ವಿಧ, ಒಬ್ಬೊಬ್ಬರ ಕಾವ್ಯವಸ್ತುವಿನಲ್ಲಿಯೂ ಒಂದೊಂದು ಹದ, ಒಬ್ಬೊಬ್ಬರ ರಚನಾ ವಿಧಾನದಲ್ಲೂ ಒಂದೊಂದು ಕ್ರಮ ಕಂಡು ಬರುತ್ತದೆ. ಹೀಗೆ, 'ನವನವೋನ್ಮೇಷಶಾಲಿನಿ' ಯಾಗಿರುವುದೇ ಪ್ರತಿಭೆ. ಒಬ್ಬೊಬ್ಬ ವ್ಯಕ್ತಿಯ ಜೀವನಾನುಭವದಲ್ಲಿಯೂ ವೈಶಿಷ್ಟ್ಯವಿರುವಂತೆ, ಒಬ್ಬೊಬ್ಬ ಕವಿಯೂ ಜಗತ್ತಿನ ಜೀವನಕ್ರಮದ ಹಿನ್ನೆಲೆಯಲ್ಲಿ ತನ್ನ ವಿಶಿಷ್ಟಾನುಭವವನ್ನು ಕಾವ್ಯದಲ್ಲಿ ನಿರೂಪಿಸುತ್ತಾನೆ. ಅಥವಾ, ಹಾಗೆ ಮಾಡುವುದರಿಂದಲೇ ಅದಕ್ಕೊಂದು ಬೆಲೆ ಬರುತ್ತದೆ. ಇಂಥ ಪ್ರತಿಭಾವಂತ ಕವಿಗಳಿಂದ ರಚಿತವಾದ ಕಾವ್ಯ ಯಾವ ಕಾಲದ್ದೇ ಆಗಲಿ, ಅದು ನಮ್ಮ ಮನಸ್ಸನ್ನು ಸೆರೆಹಿಡಿಯುತ್ತದೆ. ಅದು ಸಮಗ್ರವಾಗಿ ನಮ್ಮನ್ನು ತಣಿಸದೆ ಹೋದರೂ ಆಯಾ ಕಾವ್ಯದ ಒಂದೊಂದು ಗುಣ, ಒಂದೊಂದು ಸೊಗಸು, ನಮ್ಮ ಹೃದಯವನ್ನು ತೊನೆದು ತೂಗಿಸುತ್ತದೆ. ಅಂತೆಯೇ ಪಂಪ-ಚಾಮರಸರ ಹಿತಮಿತವಚನ, ದೇಸಿನಿಷ್ಠತೆ, ರನ್ನ - ರಾಘವಾಂಕ-

ಕುಮಾರವ್ಯಾಸರ ಭಾವಾಭಿನಯದ ಬೀಸು, ಕಸುವು, ಹರಿಹರ-ರತ್ನಾಕರವರ್ಣಿಗಳ ಸಲೀಲತೆ, ಅಂಡಯ್ಯ - ಸರ್ವಜ್ಞ - ದಾಸರು ಮೊದಲಾದವರ 'ಮಾತನಾಡಿದ ಪೊಲಂದವನಾಳ್ದ' ಪದ್ಯರಚನೆ, ಅನುಭಾವ ಕಾವ್ಯದ ಅನಂತ ಸ್ತರಗಳಲ್ಲಿ ತಮ್ಮ ಅಂತರಂಗವನ್ನು ಎರಕಹೊಯ್ದು, ಕನ್ನಡ ನುಡಿಯ ಶಕ್ತಿಸರ್ವಸ್ವವನ್ನೂ ಅದಕ್ಕೆ ಧಾರೆಯೆರೆದ ಶರಣರ ವಚನ ರಚನಾ ಸಾಮರ್ಥ್ಯ— ಇವು ಇಂದಿಗೂ ನಮ್ಮನ್ನು ಸೋಜಿಗಗೊಳಿಸುತ್ತವೆ, ಹೊಸ ಚೇತನವನ್ನು ನಮ್ಮ ಮನಸ್ಸಿಗೆ ಊಡುತ್ತಿವೆ. ಹೊಸ ಕವಿಗಳು ಅರಗಿಸಿಕೊಳ್ಳಬೇಕಾದ ಸಾಮಗ್ರಿ ನಮ್ಮ ಹಿಂದಿನ ಕಾವ್ಯಗಳಲ್ಲಿಯೂ, ವಚನ ಸಾಹಿತ್ಯದಲ್ಲಿಯೂ ಇನ್ನೂ ಸಾಕಷ್ಟಿದೆಯೆಂದು ಹೇಳಬಹುದು. ಅಲ್ಲಮ ಪ್ರಭುಗಳ ಒಂದೆರಡು ವಚನಗಳನ್ನು ಇಲ್ಲಿ ನೋಡಬಹುದು :

ವಾಯು ನಿದ್ರೆಗೆಯ್ದಡೆ ಆಕಾಶ ಜೋಗುಳವಾಡಿತ್ತು.
ಬಯಲು ಬಳಲಿದೆನೆಂದಡೆ ನಿರಾಳ ಮೊಲೆಗೊಟ್ಟಿತ್ತು.
ಆಕಾಶವಡಗಿತ್ತು, ಜೋಗುಳ ನಿಂದಿತ್ತು,
ಗುಹೇಶ್ವರನೈದಾನೆ ಇಲ್ಲದಂತೆ.

ಹರಿವ ನದಿಗೆ ಮೈಯೆಲ್ಲ ಕಾಲು.
ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ.
ಬೀಸುವ ಗಾಳಿಗೆ ಮೈಯೆಲ್ಲ ಕೈ.
ಇದು ಕಾರಣ, ಗುಹೇಶ್ವರ, ನಿಮ್ಮ ಶರಣಂಗೆ
ಸರ್ವಾಂಗವೆಲ್ಲ ಲಿಂಗಮಯವಯ್ಯ.

ಹಿಂದಣ ಕವಿಗಳೆನ್ನ ತೊತ್ತಿನ ಮಕ್ಕಳು;
ಮುಂದಣ ಕವಿಗಳೆನ್ನ ಕರುಣದ ಕಂದಗಳು.
ಆಕಾಶದ ಕವಿಗಳೆನ್ನ ತೊಟ್ಟಿಲ ಕೂಸು;
ಹರಿಬ್ರಹ್ಮರೆನ್ನ ಕಕ್ಷಕುಳ.
ನೀ ಮಾವ ನಾನಳಿಯ ಗುಹೇಶ್ವರ.

ಅನುಭಾವದ ಪರಿಭಾಷೆಯಲ್ಲಿ ಇವುಗಳ ಅರ್ಥದ ಬೆಡಗು ಏನೇ ಇರಲಿ, ಭಾವಾನುಬಂಧದಲ್ಲಿ, ಭಾಷೆಯ ಪರಮೋಚ್ಚ ಸಿದ್ಧಿಯಲ್ಲಿ, ನೂತನ ಪ್ರತಿಮಾಸೃಷ್ಟಿಯಲ್ಲಿ ವಚನ ಸಾಹಿತ್ಯದಲ್ಲಿಯ ಕೆಲವು ಭಾಗ ಅತ್ಯಂತ ಗಮನಾರ್ಹವಾಗಿದೆ.

ಆತ್ಮಪ್ರತ್ಯಯ ನಮ್ಮ ಕವಿಗಳ ಒಂದು ಸಂಪ್ರದಾಯವೇ ಆಗಿದೆಯಷ್ಟೆ ? ಹೊಸದರ ಲವಲವಿಕೆಯೂ ಅವರಲ್ಲಿ ಕೆಲಮಟ್ಟಿಗೆ ಕಂಡು ಬರುತ್ತದೆ. ಇನ್ನೊಬ್ಬ ಕವಿಗಿಂತ ತಾನು ಏನೋ ಒಂದು ನೂತನವಾದುದನ್ನು ಹೇಳಬೇಕು ಎಂಬ ಬಗ್ಗೆ

ಅವರವರಲ್ಲಿ ಒಂದು ಬಗೆಯ ಸ್ಪರ್ಧೆ ಇದ್ದಂತೆ ತೋರುತ್ತದೆ. ಭಾವದಲ್ಲಿ, ಅಲಂಕಾರದಲ್ಲಿ, ರೀತಿಯಲ್ಲಿ, ಪದರಚನೆಯಲ್ಲಿ — ಎಲ್ಲೋ ಒಂದು ಕಡೆ ಅದು ತೋರಿದರೂ, ಅವರಿಗೆ ಸಾಕಾಗಿತ್ತೆಂದು ತೋರುತ್ತದೆ. ಆದರೆ, ತಮ್ಮ ಸ್ವತಂತ್ರ ವೃತ್ತಿಯನ್ನು ಮೆರೆದು ಹೋದ ಕೆಲವರು ಮಹಾಕವಿಗಳ ಮಾತೇ ಬೇರೆ. 'ಬಗೆ ಪೊಸತಪ್ಪುದಾಗಿ' ಇರಬೇಕೆಂದು ಬಯಸಿದ ಪಂಪ 'ನಿಚ್ಚಂ ಪೊಸತು, ಅರ್ಣವಂಬೊಲತಿ ಗಂಭೀರಂ ಕವಿತ್ವಂ' ಎಂದೇ ಸಾರಿದ್ದಾನೆ. ತಮ್ಮ ಪ್ರತಿಭೆಯನ್ನು ಎಲ್ಲ ಮಟ್ಟದಲ್ಲೂ ಸಂಪೂರ್ಣ ಸೂರೆಗೊಂಡ ಕವಿಗಳ ಕಾವ್ಯ ನಿತ್ಯವೂ ಹೊಸ ಹೊಸ ಭಾವವನ್ನು ಸ್ಫುರಿಸುವುದರಲ್ಲಿ ಸಂದೇಹವೇ ಇಲ್ಲ. ಆದರೂ, ಕೆಲವು ಕವಿಗಳು ಯಾವುದರಲ್ಲಿ ಹೊಸತನ್ನು ಸಾಧಿಸಿದ್ದಾರೆ ಎಂಬುದನ್ನು ತಾವೇ ಅಲ್ಲಲ್ಲಿ ಹೇಳಿಕೊಂಡಿದ್ದಾರೆ. ಅವನ್ನು ಅವರ ಕಾವ್ಯಕ್ಕೇ ಅನ್ವಯಿಸಿ ನೋಡಿದಾಗ, ಅವರ ಹೇಳಿಕೆಗಳಲ್ಲಿ ನಿಜವಾದದ್ದು ಎಷ್ಟು, ಆತ್ಮಪ್ರತ್ಯಯ ಎಷ್ಟು ಎಂಬುದು ತಾನೇ ಹೊಳೆಯುತ್ತದೆ. ಹದಿನೇಳನೆಯ ಶತಮಾನದಲ್ಲಿ ಚಂಪುವಿಗೆ ಮತ್ತೆ ಜೀವದಾನ ಮಾಡಿದ ಷಡಕ್ಷರ ಕವಿ ತನ್ನ 'ಶಬರಶಂಕರ ವಿಳಾಸ' ದಲ್ಲಿ ಹೀಗೆ ನುಡಿದಿದ್ದಾನೆ :

> ಇದು ಪೊಸರೀತಿ ನೋಡು, ಇದು ನವೀನಮಲಂಕೃತಿ, ನವ್ಯಭಾವಂ
> ಇಂತಿದು, ನವವೃತ್ತಿ ಲೇಸಿದು, ರಸಸ್ಥಿತಿ ನೂತ್ನಮಿದಲ್ತೆ ? ನೂತನಂ
> ಪದರಚನಾ ವಿಲಾಸಮಿದು, ಕಬ್ಬಂ ಅಪೂರ್ವಮಿದೆಂದು ಕಬ್ಬಿಗರ್
> ಪದೆದು ಒಲವಿಂದೆ ಕೀರ್ತಿಸೆ, ನಿಮಿರ್ಚುವೆನೀಸುಭಗ ಪ್ರಬಂಧಮಂ

ಪಂಪನಿಂದ ಮುದ್ದಣನವರೆಗೆ ನಮ್ಮ ಹಿಂದಿನ ಕವಿಗಳು ಯಾವಯಾವ ದೃಷ್ಟಿಯಲ್ಲಿ ಪೊಸ ರೀತಿಯನ್ನೂ, ಅಪೂರ್ವತೆಯನ್ನೂ ತೋರಿಸಿದ್ದಾರೆ ಎಂಬುದನ್ನು ಖಚಿತವಾಗಿ, ಬೆಲೆಗಟ್ಟಿ ಹೇಳುವ ಕಾರ್ಯವನ್ನು ನಮ್ಮ ವಿಮರ್ಶಕರು ಇನ್ನೂ ಮಾಡಬೇಕಾಗಿದೆ. ಈಗ ಬಂದಿರುವುದರಲ್ಲಿ ಮುಕ್ಕಾಲು ಪಾಲು ಪ್ರಶಸ್ತಿಯೇ ಆಗಿದೆ. ಒಂದೆರಡು ಕಡೆಗಳಲ್ಲಿ ತೂಕದ ವಿಮರ್ಶೆ ಬಂದಿದ್ದರೂ, ಕಾವ್ಯ ಗುಣದಲ್ಲಿ ಆಯಾ ಕವಿಗಳ ಸ್ಥಾನ ನಿರ್ದೇಶಮಾಡಿ ತೋರಿಸುವುದು ಅಗತ್ಯವಿದೆ. ಅದಕ್ಕೆ ತಕ್ಕ ವಾತಾವರಣ ನಿರ್ಮಾಣವಾಗಿಲ್ಲ ಎಂದು ಕೆಲವರು ಹೇಳುತ್ತಾರೆ. ಹಾಗಾದರೆ, ಅದು ಎಂದು ನಿರ್ಮಾಣವಾಗಬೇಕು ? ಹಳಗನ್ನಡ ಕಾವ್ಯಗಳ ಬಗ್ಗೆಯೇ ಈ ಸ್ಥಿತಿಯಾದರೆ ಹೊಸಗನ್ನಡ ಕವಿತಾವಿಮರ್ಶೆಯ ಗತಿಯೇನು ? ಈ ಇಕ್ಕಟ್ಟಿನಿಂದ ಕನ್ನಡ ವಿಮರ್ಶೆ ಪಾರಾಗಿ ಬದುಕುವ ಬಗೆ ಹೇಗೆ ? ಇದು ಎಲ್ಲರೂ ಆಲೋಚಿಸಬೇಕಾದ ಇಂದಿನ ಒಂದು ಗಂಭೀರ ಪ್ರಶ್ನೆ ಎಂದು ನಾನು ಬಗೆದಿದ್ದೇನೆ.

ನಮ್ಮ ವಿಮರ್ಶಕರಲ್ಲಿ ಧೈರ್ಯ, ಓದುಗರಲ್ಲಿ ತಾಳ್ಮೆ, ಗುಣಾವಗುಣಗಳ ವಿವೇಕ, ರಸಾನುಭವಶಕ್ತಿ — ಇವುಗಳನ್ನು ಎಷ್ಟು ಅಪೇಕ್ಷಿಸಿದರೂ ಸಾಲದು. ಕಾವ್ಯದ ಜೊತೆಗೆ ವಿಮರ್ಶೆಯೂ ಬೆಳೆಯದಿದ್ದರೆ ನಿಜವಾದ ಪ್ರಗತಿ ಹೇಗೆ ಸಾಧ್ಯ? ಹಳಬರಲ್ಲಿಯ ಶಾಸ್ತ್ರಪರಿಣತಿ, ಹೊಸಬರಲ್ಲಿಯ ವಿನೂತನದೃಷ್ಟಿ ಇವೆರಡರ ಸಮನ್ವಯವನ್ನು ಸಾಧಿಸಿಕೊಂಡು ವಿಮರ್ಶೆ ಇಂದು ಮುಂದುವರಿಯಬೇಕಾಗಿದೆ. ಹೊಸಗನ್ನಡ ಸಾಹಿತ್ಯದ ಸಮಗ್ರ ವಿಮರ್ಶೆಯನ್ನು ಒಂದೆಡೆ ನೀಡಲು ಹವಣಿಸಿರುವ 'ನಡೆದು ಬಂದ ದಾರಿ' ಯ ಸಂಪುಟಗಳು — ಕೆಲವೊಂದು ಲೋಪದೋಷಗಳನ್ನು ಒಳಗೊಂಡೂ — ಈ ದಿಸೆಯಲ್ಲಿ ಮಹತ್ವದ ಹೆಜ್ಜೆಯನ್ನಿಟ್ಟಿವೆಯೆಂದು ಹೇಳಬಹುದು. I. A. Richards ಹೇಳಿರುವ, ವಿಮರ್ಶಕನಿಗಿರಬೇಕಾದ ಮೂರು ಮುಖ್ಯ ಅರ್ಹತೆಗಳನ್ನು ಇಲ್ಲಿ ನೆನೆಯಬಹುದು :

"He must be an adept at experiencing, without eccentricities, the state of mind relevant to the works of art he is judging. Secondly, he must be able to distinguish experiences from one another as regards their less superficial features. Thirdly, he must be a sound judge of values".

(ವಿಲಕ್ಷಣ ವೈಯಕ್ತಿಕ ಭಾವನೆಗಳಿಗೆ ಎಡೆಗೊಡದೆ, ತಾನು ವಿಮರ್ಶಿಸುತ್ತಿರುವ ಕಲಾಕೃತಿಗೆ ಸಂಬಂಧಿಸಿದ ಚಿತ್ತವೃತ್ತಿಯಲ್ಲಿ ತನ್ಮಯತೆಯನ್ನು ಪಡೆಯಬಲ್ಲ ಪ್ರಾವೀಣ್ಯ ಅವನಲ್ಲಿರಬೇಕು. ಎರಡನೆಯದಾಗಿ, ಅನುಭವಗಳಲ್ಲಿ ಆಳವಾದುವು-ಆಳವಲ್ಲದುವು ಇವುಗಳನ್ನು ವಿವೇಚಿಸುವ ಸಾಮರ್ಥ್ಯವುಳ್ಳವನಾಗಿರಬೇಕು. ಮೂರನೆಯದಾಗಿ, ಜೀವನದ ಮೌಲ್ಯಗಳನ್ನು ಸಮರ್ಥವಾಗಿ ಪರಾಮರ್ಶಿಸಬಲ್ಲವನಾಗಿರಬೇಕು.)

೩

ಹಳಗನ್ನಡ ಕಾವ್ಯ ಕೊನೆಕೊನೆಯಲ್ಲಿ ಭಾವ, ಭಾಷೆ, ಕಾವ್ಯಪ್ರಕಾರಗಳಲ್ಲಿ ಅನುಕರಣೆಯ ಹಾದಿಯನ್ನೇ ತುಳಿದು, ನಿರ್ಜೀವವಾಗಿ, ಕನ್ನಡ ನಾಡಿನಲ್ಲಿ ಇನ್ನೇನು ಸಂಜೆ ಬಂದು ಸೇರಿತು ಎನ್ನುವ ಹೊತ್ತಿನಲ್ಲಿ, ಮುದ್ದಣನ ಹುಂಜ ಹೊಸಕಾಲದ ಅರುಣೋದಯವನ್ನು ಸೂಚಿಸಿ, ಸಾಹಸಿಗಳನ್ನು ಎಚ್ಚರಿಸಿತು ಮುಂದೆ ಹೊಸ ರೀತಿಯ ಕಾವ್ಯಪ್ರಕಾರ ಅಲ್ಲಲ್ಲಿ ಕಾಣಿಸಿಕೊಂಡಿತು. ಬಿ. ಎಂ. ಶ್ರೀಕಂಠಯ್ಯನವರ 'ಇಂಗ್ಲಿಷ್ ಗೀತಗಳು' ಭಾವ, ಭಾಷೆ, ಛಂದಸ್ಸುಗಳಲ್ಲಿ ಇಂಥ ಹೊಸ ಮಾದರಿಯ ಕಾವ್ಯಕ್ಕೆ ಮಾರ್ಗದರ್ಶಕವಾಗಿ ಪರಿಣಮಿಸಿತು. 'ಇಲ್ಲಿ ಕೊಟ್ಟಿರುವ ಕವನಗಳೆಲ್ಲಾ

ಇಂಗ್ಲಿಷ್ ಕಾವ್ಯಮಾಲೆಯ ನಾಯಕರತ್ನಗಳಿಂದು ಆದುಕೊಂಡವಲ್ಲ. ಉತ್ತಮ-ರಾದ ಕವಿಗಳೂ ಇಲ್ಲಿ ಎಲ್ಲರೂ ಇಲ್ಲ,' ಎಂಬ ಮಾತನ್ನು 'ಶ್ರೀ'ಯವರೇ 'ಅರಿಕೆ'ಯಲ್ಲಿ ತಿಳಿಸಿದ್ದಾರೆ. 'ಇಂಗ್ಲಿಷ್ ಗೀತ'ಗಳಿಗೆ ಸಲ್ಲಬೇಕಾದ ಹೆಚ್ಚಿನ ಮರ್ಯಾದೆ-ಯನ್ನು ಸಲ್ಲಿಸಿಯೂ ಒಂದು ಮಾತನ್ನು ಹೇಳಬಹುದು. ನೂತನ ಭಾವಪ್ರಚೋ-ದನೆಗೆ ಕೆಲವರು ಭಾವಿಸಿಕೊಂಡಿರುವಷ್ಟು ಅದೊಂದೇ ಕಾರಕವಾಯಿತು ಎನ್ನು-ವಂತಿಲ್ಲ. "'ಇಂಗ್ಲಿಷ್‌ಗೀತಗಳ'ಲ್ಲಿ ಎಲ್ಲ ಅಂಗಗಳಿಂದಲೂ ಪರಿಪೂರ್ಣವಾದ ಹೊಸಗನ್ನಡ ಕಾವ್ಯ ಸುಭದ್ರವಾಗಿ ಪ್ರತಿಷ್ಠಿತವಾಯಿತು."[1] ಎಂಬ ಮಾತು ಸ್ವಲ್ಪ ಹೆಚ್ಚಾಯಿತು ಎಂದು ತೋರುತ್ತದೆ. ಆದರೆ, "ಎಲ್ಲಕ್ಕೂ ಮಿಗಿಲಾಗಿ 'ಶ್ರೀ'ಯವರಿಂದ ಕನ್ನಡಕ್ಕೆ ಆದ ಪರಮೋಪಕಾರವೆಂದರೆ, 'ಇಂಗ್ಲಿಷ್ ಗೀತಗಳ'ಲ್ಲಿ ಛಂದಸ್ಸಿನ ಹೊಸದೊಂದು ಹೆದ್ದಾರಿಯನ್ನೇ ತೆರೆದದ್ದು; ಕನ್ನಡ ಕಾವ್ಯದ ಚರಿತ್ರೆಯಲ್ಲಿ ಅವರ ಹೆಸರು ಚಿರಸ್ಮರಣೀಯವಾಗಿ ನಿಲ್ಲುವುದು ಮುಖ್ಯವಾಗಿ ಇದರಿಂದ"[2] ಎಂಬುದನ್ನು ನಾವು ಒಪ್ಪಲೇಬೇಕು.

ಹೀಗೆ ನಾಲ್ಕುದಶಕಗಳ ಹಿಂದೆ ನವೋದಯವನ್ನು ಪಡೆದ ಆಧುನಿಕ ಕನ್ನಡ ಕಾವ್ಯ ತನ್ನ ಹಿಂದಿನ ಕಾವ್ಯಸಂಪ್ರದಾಯಕ್ಕಿಂತ ಎಲ್ಲ ದೃಷ್ಟಿಯಿಂದಲೂ ಹೊಸದಾ-ಗಿರುವದು ಸ್ಪಷ್ಟವಿದೆ. ವಸ್ತುವಿನಲ್ಲಿ-ಭಾವದಲ್ಲಿ, ರೂಪದಲ್ಲಿ-ರಚನೆಯಲ್ಲಿ, ಧಾಟಿ-ಯಲ್ಲಿ-ಧೋರಣೆಯಲ್ಲಿ, ತಮ್ಮ ಭಾವಪ್ರಕಟನೆಗೆ ಹೊಸ ಹಾದಿಯನ್ನು ನಿರ್ಮಿಸಿ-ಕೊಂಡರು ನಮ್ಮ ಹಿರಿಯ ತಲೆಮಾರಿನ ಕವಿಗಳು. ಹಳಗನ್ನಡ-ನಡುಗನ್ನಡ ಕಾವ್ಯದ ಸಾರವನ್ನೂ ಇವರು ಹೀರಿಕೊಂಡವರಾಗಿದ್ದರು. ಇಂಗ್ಲಿಷ್ ರೋಮ್ಯಾಂಟಿಕ್ ಕವಿಗಳ ಕಾವ್ಯದಿಂದ ಇವರು ಪ್ರೇರಣೆಗೊಂಡಿದ್ದರೂ, ತಮ್ಮ ಸತ್ತ್ವವನ್ನು ಅದರಲ್ಲಿ ಉಡುಗಿಸಿಕೊಳ್ಳದೆ ನಮ್ಮ ನಾಡಿನ ಕಾವ್ಯಚೈತನ್ಯಕ್ಕೆ ಹೊಸ ನೀರೆರೆದು, ಪೋಷಿಸಿ, ಬೆಳೆಸಿ, ಹತ್ತು ದಿಕ್ಕಿನಲ್ಲಿಯೂ ಅದರ ಬೆಳಕನ್ನು ಹೊತ್ತಿಸಿದರು. ಜಾನಪದ ಗೀತಗಳ ಸಹಜಸೌಂದರ್ಯವನ್ನು ತಮ್ಮ ಕಾವ್ಯಕ್ಕೆ ಬಗ್ಗಿಸಿಕೊಂಡು, ಅಪೂರ್ವವಾದ ನಾದ, ಲಯ, ಮಾಧುರ್ಯವನ್ನು ಹೊರಹೊಮ್ಮಿಸಿದರು. ಪ್ರಕೃತಿ ಸೌಂದರ್ಯದ ರುದ್ರ-ರಮಣೀಯತೆ ಅದೇ ಶೈಲಿಯಲ್ಲಿ ಅವರ ಕಾವ್ಯದಲ್ಲಿ ಪ್ರತಿಫಲಿಸಿತು. ಅಂತ-ರಂಗದ ಅನುಭವ, ಅನಿಸಿಕೆಗಳು ಈ ಕಾವ್ಯರೂಪದಲ್ಲಿ ಮೂರ್ತತ್ವವನ್ನು ಪಡೆದವು. ನಾಡು-ನುಡಿಗಳ ಅಭಿಮಾನ ಕಾದ್ಯದುದ್ದಕ್ಕೂ ಹರಿಯಿತು. ಭಾಷೆ-ಯಲ್ಲಿ ಹೊಸ ಕಾವು, ವೇಗ ಹರಿದಾಡಿತು. ಸೃಷ್ಟಿಯಲ್ಲಿ ನಡೆಯುವ ತೀರ

---

೧. 'ನಡೆದುಬಂದದಾರಿ' ಭಾಗ ೧, ಪುಟ ೪೦.

೨. 'ಇಂಗ್ಲಿಷ್ ಗೀತಗಳ' ದ್ವಿತೀಯ ಪರಿಷ್ಕರಣಕ್ಕೆ ಶ್ರೀ ತೀ. ನಂ. ಶ್ರೀಯವರು ಬರೆದ ಪ್ರಸ್ತಾವನೆ-ಪುಟ ೩೨.

ಸಾಮಾನ್ಯ ಕ್ರಿಯೆಗಳಿಂದಲೂ ಕವಿಹೃದಯ ಸಂವೇದನೆಗೊಂಡು ಮಿಡಿಯಿತು. ಭಾವನಿಷ್ಠವಾಗಿ, ಆದರ್ಶನಿಷ್ಠವಾಗಿ ಹೊಸಮನೋಧರ್ಮದಲ್ಲಿ ಬೆಳೆದ ಆಧುನಿಕ ಕಾವ್ಯ ಸಾಮಾಜಿಕ ಪ್ರಜ್ಞೆಯನ್ನೂ ತಕ್ಕಮಟ್ಟಿಗೆ ಪಡೆದುಕೊಂಡಿತು. ಭಾವಗೀತೆಯಲ್ಲಿಯೂ ನಾನಾಪ್ರಯೋಗಗಳು ನಡೆದು ಹೊಸಗನ್ನಡ ಕವಿತೆ ಸಮೃದ್ಧಿಯನ್ನು ಪಡೆಯಿತು. ಹೀಗೆ ಮೂರು ದಶಕಗಳ ಕಾಲ ಕನ್ನಡ ಭಾವಪ್ರಧಾನಕಾವ್ಯ ವೈವಿಧ್ಯಪೂರ್ಣವಾಗಿ, ಸ್ವಾತಂತ್ರ್ಯ ಪೂರ್ವದ ಸಮರೋತ್ಸಾಹದ ಜೊತೆಯಲ್ಲಿಯೇ ಬೆಳೆದು, ನಮ್ಮ ನಾಡಿನ ಆಶೆ, ಆಕಾಂಕ್ಷೆ, ಆದರ್ಶಗಳಿಗೆ, ಜನದ ಬದುಕಿನ ನೋವು-ನಲಿವುಗಳಿಗೆ, ಒಲವು-ಚೆಲುವುಗಳಿಗೆ, ಪ್ರಕೃತಿಯ, ಆತ್ಮದ ಅನುಸಂಧಾನಕ್ಕೆ ಇಂಬುಗೊಟ್ಟು, ಹತ್ತಾರು ಉತ್ತಮ ಕವಿಗಳ ಕೈಯಲ್ಲಿ ತನ್ನ ಮೇಲ್ಮೆಯನ್ನೂ, ಸಿದ್ಧಿಯನ್ನೂ ಪಡೆಯಿತು. 'ಚಿರನೂತನ ಚೇತನದುತ್ಸಾಹದಿ ನವೀನ ಜೀವನ ಚಿಮ್ಮು' (ಕುವೆಂಪು) ವುದನ್ನು ಆಗ ಹೊರಟ ನೂರು ಸ್ವರಗಳಲ್ಲಿಯೂ ಗುರುತಿಸಬಹುದು. ಹೊಸಗನ್ನಡ ಕಾವ್ಯದ ಈ ವಸಂತ ವೈಭವಕ್ಕೂ ಬೇಂದ್ರೆಯವರ ಕಾವ್ಯವಾಣಿಯನ್ನು ನಾವು ಅನ್ವಯಿಸಬಹುದು :

> ಉದಿತ ದಿನ ಮುದಿತ ವನ
> ವಿಧವಿಧ ವಿಹಗಸ್ವನ
> ಇದುವೆ ಜೀವ, ಇದು ಜೀವನ
> ಪವನದಂತೆ ಪಾವನ
>
> ಏನೊ ವಿಧ ! ಏನೊ ಹದ
> ಗಾಳಿಗೊಡೆದ ಬುದ್ಬುದ
> ಬೆಳಕೆ ಬದುಕು ಎಂಬ ಮುದ
> ಜೀವ ಹೊಮ್ಮಿ ಚಿಮ್ಮಿದ
>
> ನೂರು ಮರ ! ನೂರು ಸ್ವರ
> ಒಂದೊಂದೂ ಅತಿಮಧುರ
> ಬಂಧವಿರದೆ ಬಂಧುರ
> ಸ್ವಚ್ಛಂದ-ಸುಂದರ

ಮೂರನೆಯ ದಶಕದ ಕೊನೆಯಲ್ಲಿಯೇ ಈ ಸಂಪ್ರದಾಯದ ಇಳಿಗಾಲ ಪ್ರಾರಂಭವಾಯಿತೆನ್ನಬಹುದು. ವೈಯಕ್ತಿಕವಾಗಿ ತಮ್ಮ ವಿಶಿಷ್ಟ ಕಲಾತ್ಮಕತೆಯನ್ನು ಬೆಳಗಿದ ಕೆಲವು ಕವಿಗಳನ್ನು ಬಿಟ್ಟರೆ, ಉಳಿದ ಬಹುಪಾಲು ಕವಿತೆ ಹೇಳಿದ್ದನ್ನೇ ಹೇಳುವುದರಲ್ಲಿ ಮಗ್ನವಾಯಿತು ಭಾವಾತಿರೇಕತೆ ಉಳಿದ ಎಲ್ಲ

ಗುಣಗಳನ್ನೂ ನುಂಗಿ ನೀರು ಕುಡಿಯಿತು. ಕೆಲವೊಂದು ವಿಶಿಷ್ಟ ಅನುಭವಗಳನ್ನು ಮಾತ್ರ ಈ ಕಾವ್ಯ ರೂಪದಲ್ಲಿ ಹೊಂದಿಸಿಕೊಂಡದ್ದರಿಂದ ಜೀವನದ ಸಮಗ್ರ ಅನುಭವವನ್ನು ಇದರಲ್ಲಿ ಪ್ರತಿಬಿಂಬಿಸುವದು ಆಗಲಿಲ್ಲ. ಭಾವ-ಭಾಷೆಗಳಲ್ಲಿಯ ನಿಸ್ಸತ್ವದಿಂದ ಬೇರೊಂದು ದಾರಿಯನ್ನು ಹುಡುಕಬೇಕಾಯಿತು ಸ್ವಾತಂತ್ರ್ಯೋತ್ತರ ಕಾಲದ ಬದಲಾದ ಪರಿಸ್ಥಿತಿಯಲ್ಲಿ ಸಮಸ್ಯೆಗಳನ್ನು ಹೊಸ ರೀತಿಯಲ್ಲಿಯೇ ಎದು-ರಿಸಬೇಕಾಯಿತು. ವಾಸ್ತವತೆಯನ್ನು ಎದುರಿಸಿ ನಿಲ್ಲುವ ಕೆಚ್ಚು ಭಾವಗೀತೆಗೆ ಬರಲಿಲ್ಲ. ಇಂದಿನ ವೈಚಾರಿಕಯುಗದ ವಾಣಿಯಾಗಲು ಅದು ಅಸಮರ್ಥ-ವಾಯಿತು ಪ್ರಗತಿಶೀಲತೆಯ ಗಾಳಿಯೇನೊ ಬೀಸಿ ಹೋದರೂ, ಕಾವ್ಯದ ಪ್ರಗತಿಯ ಕಡೆಗೆ ಕವಿಗಳ ಲಕ್ಷ್ಯ ಹರಿಯಲಿಲ್ಲ. ತನ್ನ ಕಾರ್ಯವನ್ನು ಮಾಡಿ ಮುಗಿಸಿದ ಆಧುನಿಕ ಕಾವ್ಯಮಾರ್ಗದ ದೋಷಗಳೂ ಹೀಗೆ ಕಣ್ಣಿಗೆ ಬಡಿಯು-ವಂತಾಗಿ, ಹೊಸ ರೂಪ, ರಚನೆ, ವಿಧಾನ, ಗತ್ತುಗಳಲ್ಲಿ ಕಾವ್ಯ ತನ್ನತನವನ್ನು ಕಂಡುಕೊಳ್ಳುವಂತೆ ಹವಣಿಸಲು ಈ ಹಾದಿಯಲ್ಲಿಯೇ ವಿಚಾರ ಮಾಡುತ್ತಿದ್ದ ಕೆಲವು ಕವಿಗಳು ಮುಂದಾದರು.

೪

ನವ್ಯಕಾವ್ಯದ ಬಗ್ಗೆ ನಮ್ಮಲ್ಲಿ ವಿಚಾರ ಪ್ರಾರಂಭವಾಗಿ ಆಗಲೇ ಒಂದು ದಶಕವಾಗುತ್ತ ಬಂದಿತು. ಆ ದಿಸೆಯಲ್ಲಿ ಹಲವಾರು ಪ್ರಯೋಗಗಳೂ ಈಗಾಗಲೆ ಜನರ ಕಣ್ಣೆದುರು ಬಂದಿವೆ. ಆದರೂ ಸಾಮಾನ್ಯ ಓದುಗರಲ್ಲಿ ಅದರ ಬಗ್ಗೆ ಸ್ಪಷ್ಟ-ವಾದ ಕಲ್ಪನೆ ಮೂಡಿದಂತಿಲ್ಲ. ನವ್ಯಕಾವ್ಯದ ಲಕ್ಷಣಗಳನ್ನೂ ಈಗ ಅದರ ಅಗತ್ಯವನ್ನೂ ಕುರಿತು ಅಲ್ಲಲ್ಲಿ ಅಭಿಪ್ರಾಯಗಳು ವ್ಯಕ್ತಪಟ್ಟವೆಯಾದರೂ, ನವ್ಯ ಕಾವ್ಯದ ಪುರಸ್ಕರ್ತರಲ್ಲಿ ಇಬ್ಬರು ಪ್ರಮುಖರ ವಿಚಾರಗಳನ್ನು ಇಲ್ಲಿ ಸ್ವಲ್ಪಮಟ್ಟಿಗೆ ಪರಿಶೀಲಿಸಬಹುದು. ೧೯೫೦ ರ ಮುಂಬಯಿ ಸಾಹಿತ್ಯ ಸಮ್ಮೇಲನದ ಸಾಹಿತ್ಯ-ಗೋಷ್ಠಿಯ ಅಧ್ಯಕ್ಷಭಾಷಣದಲ್ಲಿ ಶ್ರೀ ವಿ. ಕೃ. ಗೋಕಾಕರು ನವ್ಯಕಾವ್ಯದ ನೂತನ ಮಾರ್ಗವನ್ನು ಕುರಿತು ಹೀಗೆ ಪ್ರತಿಪಾದಿಸಿದರು :

" ಕನ್ನಡ ಕಾವ್ಯದಲ್ಲಿ ' ಆಧುನಿಕ ' ಯುಗವು ಮುಗಿಯುವ ಸಮಯ ಬಂದಿದೆ; ನವ್ಯಯುಗ ಪ್ರಾರಂಭವಾಗಲಿದೆ............ ಒಂದು ಪರಂಪರೆಯು ಪೂರ್ಣ-ವಾದಾಗ ಇನ್ನೊಂದು ಹೊಳಹನ್ನು ಹಾಕದೆ ಉಕ್ತಿಗೆ ಸಮಗ್ರತೆಯೂ, ಕಾಂತಿಯೂ ಬರುವದು ಕಠಿನ. ............ ನವೀನ ಪರಿಸ್ಥಿತಿಯೂ ಕನ್ನಡ ಕಾವ್ಯದಲ್ಲಿಯ ಒಂದು ಪರಂಪರೆಯ ಕೃತಕೃತ್ಯತೆಯೂ ನವ್ಯಕಾವ್ಯದ ಅಗತ್ಯವನ್ನು ಸೂಚಿಸು-

ತ್ತವೆ ". ನವ್ಯಮಾರ್ಗದ ಕಾವ್ಯಾಂಗಗಳನ್ನು ವಿವರಿಸುತ್ತ ಆಂಗ್ಲಕಾವ್ಯದಲ್ಲಿಯ ನವ್ಯಪದ್ಧತಿಯನ್ನು ಗಮನದಲ್ಲಿರಿಸಿಕೊಂಡು ಅವರು ಹೇಳಿರುವ ಮುಖ್ಯ ಮಾತು-ಗಳಿವು : " ನವ್ಯ ಕವಿಯು ಕಾವ್ಯ ವಸ್ತುವನ್ನು ಹೃದಯದಿಂದಲೂ ಬುದ್ಧಿ-ಯಿಂದಲೂ ಕೂಡಿಯೆ ಭೇದಿಸುತ್ತಾನೆ. ತನ್ನ ವ್ಯಕ್ತಿತ್ವವನ್ನು ಕಾವ್ಯವಸ್ತುವಿನ ಪ್ರತೀತಿಯಲ್ಲಿ ನವ್ಯಕವಿ ಕರಗಿಸಿಬಿಡುತ್ತಾನೆ. ಆಂತರಿಕತೆಯೂ ವಸ್ತುನಿಷ್ಠತೆಯೂ ಉಚಿತವಾಗಿ ನವ್ಯಕಾವ್ಯದಲ್ಲಿ ಬೆರೆತುಕೊಂಡಿರುತ್ತವೆ. ಸ್ವಪ್ನತಂತ್ರ ಇದರ ವಿಶೇಷ ನಿರೂಪಣೆ. ವಾಸ್ತವಿಕವಾದ ಪ್ರತಿಮೆಗಳಲ್ಲಿ ಐಂದ್ರಿಯಕ ಅನುಭವ ಮನದಟ್ಟಾ-ಗುವಂತೆ ಮಾಡುವದೂ, ಹಾಗೂ ಪ್ರತಾನಿತ ಪ್ರಜ್ಞೆಗಳ ಮಟ್ಟದಲ್ಲಿ ಗುರುತಿಸಲು ಸಾಧ್ಯವಾದ ಸೂಕ್ಷ್ಮ ಪ್ರತಿಮೆಗಳು ಈ ಕಾವ್ಯದ ಚಿತ್ರಸೃಷ್ಟಿಯ ವೈಶಿಷ್ಟ್ಯ. ನವ್ಯ-ಕಾವ್ಯದ ಶೈಲಿ ಸಂಯಮಯುಕ್ತ, ವಿಚಾರಿತರಮಣೀಯ, ಚಿಂತನಪರ. ಬಳಕೆಯ ಮಾತನ್ನು ನೇತವಾಗಿ ಕಾವ್ಯಭಾಷೆಯಾಗಿಸುವದು. ಒಂದು ಅನನ್ಯ ಅರ್ಥವನ್ನು ಸೂಚಿಸಲು ನವ್ಯಕವಿಯು ಒಮ್ಮೊಮ್ಮೆ ಅನ್ಯಕವಿಗಳ ಶಬ್ದಸಮುಚ್ಚಯ, ಪಡೆನುಡಿಗಳನ್ನು ಬಳಸಿಕೊಳ್ಳುವನು. ಪ್ರತಿಯೊಂದು ಕವನಕ್ಕೂ ಅನನ್ಯವಾದ ಒಂದು ಛಂದಃಶರೀರವಿರುತ್ತದೆ. ಒಂದು ವಿಶ್ವಮಾನವತೆಯು ನವ್ಯಕಾವ್ಯವನ್ನು ಪ್ರೇರಿಸುತ್ತದೆ. ಬರಿ ಶೂನ್ಯತಾವಾದವೇ ನವ್ಯತೆಯೆಂದಾಗಲಿ ಇಲ್ಲವೆ ಐಂದ್ರಿಯಕ ಜೀವನದ ವಿಕೃತಿಯನ್ನು ತೋರಿಸುವ ಚಿತ್ರಸೃಷ್ಟಿ ನೂತನತರ ಮಾರ್ಗವೆಂದಾಗಲಿ ನಾವು ತಿಳಿಯದಿರೋಣ ಒಂದು ಕಾವ್ಯಮಾರ್ಗದ ನವ್ಯತೆಯು ಅದರ ವಿಶಾಲ ದರ್ಶನದಲ್ಲಿದೆ; ವಿಕೃತಿಗಳ ಪ್ರದರ್ಶನದಲ್ಲಿಲ್ಲ ". ಇವೆಲ್ಲ ಇದ್ದೂ ಅದರಲ್ಲಿ ಕಾವ್ಯ-ಗುಣವೇ ಇರದಿದ್ದರೆ ಹೇಗೆ? ಎಂಬ ಪ್ರಶ್ನೆಯನ್ನು ನಾವಿಲ್ಲಿ ಎತ್ತಬಹುದು. ಅದಕ್ಕೆ ಗೋಕಾಕರು 'ನವ್ಯಧ್ವನಿ'ಯ ಮುನ್ನುಡಿಯಲ್ಲಿ ಉತ್ತರಿಸಿದ್ದಾರೆ : " ಕಾವ್ಯಶೈಲಿಯ ಮೂಲಗುಣ ಅದರ ಮಾಂತ್ರಿಕತೆ, ಜೀವನವನ್ನು ಕಲೆಯಾಗಿ ಪಲ್ಲಟಿಸುವ ಪವಾಡ. ಇದಿಲ್ಲದೆ ಶೈಲಿಯು ನವ್ಯವಾಗಬಹುದು; ಕಾವ್ಯವಾಗ-ಲಾರದು ".

ಆಧುನಿಕ ಕನ್ನಡ ಕಾವ್ಯದಲ್ಲಿ ಒಂದು ಘಟ್ಟ ಕಳೆದು, ಇನ್ನೊಂದು ಘಟ್ಟ ಮೊದಲಾಗುತ್ತಿರುವದನ್ನೂ, ಅದರ ರೂಪರೇಷೆಗಳನ್ನೂ ಸೂಚಿಸಿ, ಕಾವ್ಯಕ್ಕೆ ಮತ್ತೆ ವಾಸ್ತವದ ರಕ್ತದಾನ ನಡೆಯಬೇಕು, ಮತ್ತೆ ಮಣ್ಣಿನ ವಾಸನೆ ಹೊಡೆಯಬೇಕು, ಎಂದು ಶ್ರೀ ಗೋಪಾಲಕೃಷ್ಣ ಅಡಿಗರು ತಮ್ಮ 'ನಡೆದುಬಂದ ದಾರಿ' (೧೯೫೨) ಕವನ ಸಂಗ್ರಹದಲ್ಲಿ ಸಹೃದಯರಿಗೆ ನಿವೇದಿಸಿಕೊಂಡಿದ್ದಾರೆ. ತಾವು ಬರೆದ 'ಹಿಮಗಿರಿಯ ಕಂದರ'ದ ಮೇಲೆ ಇಲಿಯಟ್‌ನ 'ವೇಸ್ಟಲ್ಯಾಂಡಿ'ನ

ಪ್ರಭಾವವಿದೆ ಎಂಬುದನ್ನು ನಿರಾಕರಿಸಿ, " ಗೋಕಾಕರು ಬೊಂಬಾಯಿ ಸಮ್ಮೇಳನ-ದಲ್ಲಿ ಆಡಿದ ಮಾತುಗಳು, ಅದೇ ನೇರದಲ್ಲಿ ಯೋಚನೆ ಮಾಡುತ್ತಿದ್ದ ನನಗೆ ಯುಕ್ತವೆನಿಸಿದವು; ಅಷ್ಟು ಸತ್ಯ[೧] " ಎಂದು ನುಡಿದಿದ್ದಾರೆ. ನವ್ಯಕಾವ್ಯದ ಬಗ್ಗೆ, ಅದರ ತಂತ್ರದ ಬಗ್ಗೆ ಇವರಿಬ್ಬರ ಅಭಿಪ್ರಾಯಗಳಲ್ಲಿ ಸಾಕಷ್ಟು ಸಾಮ್ಯವಿದೆ. ಆದರೆ ಅವರಿಬ್ಬರ ಕಾವ್ಯಕೃತಿಗಳಲ್ಲಿ ಮಾತ್ರ ವಿಭಿನ್ನತೆ ಎದ್ದು ಕಾಣುತ್ತದೆ. ಈಗ ಅಡಿಗರ ವಿಚಾರಸರಣಿಯನ್ನೂ, ಅದಕ್ಕೆ ಅವರ ಸ್ಪಷ್ಟ ವಿವರಣೆಯನ್ನೂ ಹೀಗೆ ಸಂಗ್ರಹಿಸ-ಬಹುದು :

" ಒಂದು ಸಂಪ್ರದಾಯದ ಸತ್ವ ತೀರಿತೆಂದರೆ, ಆ ಸಂಪ್ರದಾಯದಲ್ಲಿ ಇನ್ನು-ಮುಂದೆ ಉತ್ತಮ ಕಾವ್ಯ ಬರುವ ಸಂಭವ ಕಡಿಮೆ ಎಂಬಷ್ಟು ಅರ್ಥವಲ್ಲದೆ, ಆ ಸಂಪ್ರದಾಯ ಸತ್ವಶಾಲಿಯಾಗಿದ್ದಾಗ ಅದರಲ್ಲಿ ರಚಿತವಾದ ಉತ್ತಮ ಕೃತಿಗಳಿಗೆ ಈಗ ಬೆಲೆಯಿಲ್ಲ ಎಂದು ಅರ್ಥವಲ್ಲ ........ ಆದರೆ ಸದ್ಯಕ್ಕೆ ಇನ್ನೂ ಒಂದು ತಲೆ-ಮಾರಿನ ತನಕವಾದರೂ ಉತ್ತಮ ಕಾವ್ಯ ರೋಮ್ಯಾಂಟಿಕ್ ಸಂಪ್ರದಾಯಕ್ಕೆ ತೀರ ವಿರುದ್ಧವಾದ ದಿಕ್ಕಿನಲ್ಲೇ ಹರಿದೀತು ಎಂದು ತೋರುತ್ತದೆ. ನವ್ಯ ಕಾವ್ಯದ ಹೊಸ ಪ್ರಯೋಗ ಈಗ ನಡೆಯುತ್ತಿರುವದು ಆಧುನಿಕ ಕನ್ನಡ ಕಾವ್ಯದ ತಳಹದಿಯ ಮೇಲೆಯೇ........ ಕಾಲಪರಿವರ್ತನೆಯು, ವಾತಾವರಣ ಭಿನ್ನತೆಯು, ದೃಷ್ಟ್ಯಂತರದ ಪ್ರತೀತಿಯೇ ಕಾವ್ಯದಲ್ಲಿ ನವ್ಯತೆಯ ಮೂಲ. ಪ್ರತಿಯೊಂದು ಕಾವ್ಯಮಾರ್ಗದಲ್ಲೂ ಅದರದರ ಗಂಡಾಂತರ ಇದ್ದೇಇರುತ್ತದೆ. ಆ ಮಾರ್ಗದಲ್ಲಿ ಸತ್ವವಿದ್ದಾಗ ಆ ಗಂಡಾಂತರಗಳನ್ನು ಮೆಟ್ಟಿನಿಂತು ಕೃತಿ ಕೃತಾರ್ಥವಾಗುತ್ತದೆ ".

ರೋಮ್ಯಾಂಟಿಕ್ ಸಂಪ್ರದಾಯದ ಗುಣವಿಶೇಷಗಳನ್ನೂ ಅದರ ಸಿದ್ಧಿಗಳನ್ನೂ ಅವರು ಒಪ್ಪಿಕೊಂಡು, ಅದರ ಮಹತ್ತರವಾದ ದೋಷಗಳನ್ನು ಹೀಗೆ ಸೂಚಿಸಿ-ದ್ದಾರೆ : "ಭಾವಾತಿರೇಕದ ವ್ಯರ್ಥ ಕೋಲಾಹಲ. ಅನುಭವಗಳನ್ನು ಅತಿ ಸರಳ ಮಾಡುವ ಮನಸ್ಸಿನ ಪಕ್ಷಪಾತ, ಶಬ್ದಜಾಲದ ಕಣ್ಣುಕಟ್ಟು; ಸಂಗೀತ ಪಾರವಶ್ಯ-ದಿಂದ ಬರುವ ಗದ್ಯತ್ವ, ಅರ್ಥಶೂನ್ಯತೆ; ಸೋಗಿನ ಅಧ್ಯಾತ್ಮದ ಆತ್ಮವಂಚನೆ, ಪರವಂಚನೆಯ ಪ್ರಯತ್ನ; ಈ ಎಲ್ಲ ದೋಷಗಳೂ ಈ ಸಂಪ್ರದಾಯದ ಶಕ್ತಿಕುಗ್ಗಿ, ಅದು ಜಡವಾದಾಗ ರೋಗಗಳಂತೆ ಪ್ರಬಲಿಸಿ ಕಾವ್ಯ ಸೃಷ್ಟಿಗೆ ಮಾರಕವಾಗುತ್ತವೆ."

"ಸ್ವಾತಂತ್ರ್ಯೋತ್ತರ ಭಾರತದ ವಾತಾವರಣದಲ್ಲಿ ಸಮೂಲ ಪರಿವರ್ತನೆ ಆಗಿದೆಯೆಂಬ ಮಾತನ್ನು ಇಲ್ಲಿ ನೆನಪಿನಲ್ಲಿಡಬೇಕು........ ಚಿಂತನೆ, ಸತತ ಪರಿಶ್ರಮ

---

೧ 'ಪ್ರಜಾವಾಣಿ' ೨೦-೧-೧೯೫೭

ಈ ಗುಣಗಳ ಕಡೆಗೆ ದೇಶದ ಮನಸ್ಸು ತಿರುಗಿಸುತ್ತಿದೆ. ವರ್ತಮಾನಕಾಲದ ನಿರಾಶೆ, ನಿರುತ್ಸಾಹ, ದಿಗ್ಭ್ರಾಂತಿಗಳ, ಸಡಿಲು ಬಗೆಗಳ, ಚಿತ್ತವಿಕಲ್ಪದ ಚೌಕಟ್ಟಿನಲ್ಲಿ ಕಾವ್ಯ ಇಂದು ತನ್ನ ಜೀವನ ದರ್ಶನವನ್ನು ಧ್ವನಿಸಬೇಕಾಗಿದೆ......... ಇದು ಪ್ರಯೋಗದ ಕಾಲ; ಇನ್ನೊಂದು ನವೋದಯ ಕಾಲ. ಪರಂಪರೆಯ ಸಾರವನ್ನು ಆದಷ್ಟು ಒಳಗೊಂಡೇ ನವ್ಯಕಾವ್ಯ ಭವಿಷ್ಯದತ್ತ ಕೈಚಾಚ ಬಯಸುತ್ತದೆ. ಕಾವ್ಯವೂ ಒಂದು ಕಲೆ. ಹೇಳುವದನ್ನು ಎಷ್ಟು ಸಂಗ್ರಹವಾಗಿ, ಎಷ್ಟು ಸೂಚ್ಯ ಧ್ವನಿಪೂರ್ಣವಾಗಿ ಕಾವ್ಯ ತನ್ನ ಪರಿಧಿಯೊಳಗೆ ಎಷ್ಟು ವೈವಿಧ್ಯವನ್ನು ಒಳಕೊಳ್ಳಬಹುದೋ ಅಷ್ಟನ್ನೂ ಒಳಕೊಂಡು ನವ್ಯಕಾವ್ಯ ರೂಪುಗೊಳ್ಳುವಂತೆ ತೋರುತ್ತದೆ. ಹೊಸ ಕಾಲದ ಹೊಸ ಅನುಭವ ಪ್ರಪಂಚದ ಅನಂತಕೋನಗಳನ್ನು ಕಾಣಬಲ್ಲ ಮನಸ್ಸಿನ ವಿಶಿಷ್ಟ ಕ್ರಿಯೆಗಳನ್ನು ಯಥಾವತ್ತಾಗಿ ಚಿತ್ರಿಸಲು ತಕ್ಕ ಹೊಸ ತಂತ್ರವನ್ನು ನವ್ಯಕಾವ್ಯ ರೂಪಿಸಿಕೊಳ್ಳದೆ ಗತ್ಯಂತರವಿಲ್ಲ......... ಇಂದಿನ ಜಗತ್ತಿನ ಸಮಸ್ಯೆಗಳು ಜಟಿಲ; ಕ್ಲಿಷ್ಟ. ಇಂದಿನ ಭಾವಗಳು ಭಾವಸಂಕರದ ಕಲಸುಮೇಲೋಗರ. ಇಂದಿನ ಜ್ಞಾನಸಂಪತ್ತು ಅಪರಿಮಿತ ಎಂದು ಅರಿತವನಿಗೆ ಇಂದಿನ ಕಾವ್ಯವೂ ಜಟಿಲವಾದರೆ ಯಾವ ಆಶ್ಚರ್ಯವೂ ಆಗಲಾರದು. ”[೧]

ಈ ಮೇಲಿನ ವಿವರಣೆಯಿಂದ ನವ್ಯಕಾವ್ಯದ ಒಂದು ಸ್ಪಷ್ಟ ಕಲ್ಪನೆ ತಮಗೆ ಆಗಿರಬಹುದಾಗಿ ಭಾವಿಸುತ್ತೇನೆ. ಆದರೆ ಒಂದು ಮಾತು ಮಾತ್ರ ನಿಜ : ಸಾಮಾನ್ಯ ವಾಚಕರ ದೃಷ್ಟಿಯಲ್ಲಿ ಈ ಪರಿವರ್ತನೆ ಒಂದು ಅನಾವಶ್ಯಕ ಗೊಂದಲವಾಗಿ ತೋರಿದರೆ ಆಶ್ಚರ್ಯವಿಲ್ಲ. ಅಲ್ಲದೆ, ಇವರು ತಿಳಿದುಕೊಂಡಿರುವಷ್ಟು ಭಾವನಿಷ್ಠ ಕಾವ್ಯ ಸಂಪ್ರದಾಯ (‘ ರಸ ಸಂಪ್ರದಾಯ ’ ಎಂದು ಇದಕ್ಕೆ ಇನ್ನೊಂದು ಹೆಸರನ್ನು ಶ್ರೀ ಗೌರೀಶ ಕಾಯಕಿಣಿಯವರು ಈಚೆಗೆ ಉಪಯೋಗಿಸಿದ್ದಾರೆ. ) ಅತಿರೇಕಕ್ಕೆ ಹೋಗಿದೆಯೆ ? ಅದನ್ನು ವಿರೋಧಿಸಿ ನಿಲ್ಲಲು ಇಷ್ಟೊಂದು ತೀವ್ರ ಪ್ರತಿಕ್ರಿಯೆಯ ಆವಶ್ಯಕತೆ ಇದೆಯೆ ? ಎಂಬುದನ್ನು ಬೇಕಾದರೆ ಸಾವಧಾನವಾಗಿ ವಿಚಾರಿಸಬಹುದು. ಭಾವಗೀತೆಯ ಚರಣಗಳನ್ನೇ ಮೆಲುಕಾಡಿಸಿ ಸುಖಪಡೆಯುತ್ತಿರುವ ನಮ್ಮ ಓದುಗರು ಅದರ ಇಂಗಿತವನ್ನೇ ಇನ್ನೂ ಸಂಪೂರ್ಣ ಅರಗಿಸಿಕೊಳ್ಳದವರಾಗಿದ್ದಾರೆ. ‘ಗರಿ’ಯಿಂದ ‘ಮುಗಿಲಮಲ್ಲಿಗೆ’ಯ ವರೆಗೆ ವಿಪುಲವೂ ವೈವಿಧ್ಯಪೂರ್ಣವೂ ಆದ ಕಾವ್ಯಸೃಷ್ಟಿ ಮಾಡಿದ ಬೇಂದ್ರೆಯವರನ್ನು ಬರಿಯ ಲಾವಣಿ ಕವಿಗಳೆಂದೇ ಎಷ್ಟೋ ಜನ ಭಾವಿಸಿರುವದುಂಟು ಈಗಲೂ. ಕುವೆಂಪು ಅವರ “ ರಾಮಾಯಣ ದರ್ಶನ ”

---

೧. ‘ ಕನ್ನಡ ಸಾಹಿತ್ಯ ಸಮೀಕ್ಷೆ ’ ( ೧೯೫೪ ) ಯಲ್ಲಿಯ ಅಡಿಗರಲೇಖನ— ಮೈಸೂರು ಕಲಾಕ್ಷೇತ್ರದ ಪ್ರಕಟನೆ.

ವನ್ನು ಓದದೆ, ಅರ್ಥಮಾಡಿಕೊಳ್ಳದೆ, ಗದ್ದುಗೆಯ ಮೇಲಿಟ್ಟು ಪೂಜೆ ಮಾಡುವವರೂ ಉಂಟು. ಪರಿಸ್ಥಿತಿ ಹೀಗಿರುವಾಗ, ನವ್ಯ ಪ್ರಯೋಗಗಳ ರಸಾನುಭವದತ್ತ ರಸಿಕರು ಸಾಕಷ್ಟು ಲಕ್ಷ್ಯ ವಹಿಸುತ್ತಿಲ್ಲ. ಅಲ್ಲದೆ, ಭಾವಗೀತೆಗಿದ್ದ ಗೇಯಗುಣ ಜನರ ಮನಸ್ಸನ್ನು ಆಕರ್ಷಿಸಿದಂತೆ ಆ ಪ್ರಚಾರಸೌಲಭ್ಯ ಈ ಹೊಸಕವಿತೆಗೆ ಇಲ್ಲ. ರೋಮ್ಯಾಂಟಿಕ್ ಕವಿಗಳು ಸಾಮಾನ್ಯ ಜನರಲ್ಲಿ ಕಾವ್ಯದ ಬಗ್ಗೆ ಪ್ರೀತಿ-ಅಭಿರುಚಿ-ಗಳನ್ನು ಬೆಳೆಸಿಕೊಂಡು ಬಂದಿದ್ದಾರೆ. ಈಗ ಒಮ್ಮೆಲೆ ಆ ಬಗ್ಗೆ ಅನಾಸ್ಥೆ ಉಂಟಾಗು-ವಂತಾಗಬಾರದು. ನವ್ಯಕಾವ್ಯ ಜನರ ಹೃದಯಗೋಚರವಾಗುವಂತೆ ಪ್ರಕಟ-ಗೊಳ್ಳುವ ಬಗ್ಗೆ ನಮ್ಮ ಕವಿಗಳು ಕೊಂಚ ವಿಚಾರಿಸಿದರೆ ತಪ್ಪೇನಿಲ್ಲ. ರಸಿಕರನ್ನು ಕೆಲಮಟ್ಟಿಗಾದರೂ ಕವಿ ತನ್ನ ಕೈಯಲ್ಲಿ ತೆಗೆದುಕೊಂಡಿರಬೇಕಾಗುತ್ತದೆ. ಇವರಿಬ್ಬರ ಸಮಾನ ಬಾಂಧವ್ಯವನ್ನು ಹೇಗೆ ಉಂಟುಮಾಡಬೇಕೆಂಬುದು ಇಂದಿನ ಕಾವ್ಯದ ಒಂದು ಸಮಸ್ಯೆಯಾಗಿದೆ. ಆದರೆ ಓದುಗರ ಮಟ್ಟವನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಕವಿ ತನ್ನ ಕೃತಿರಚನೆಗೆ ತೊಡಗಲಾರ. ಅವರವರ ಅಭಿರುಚಿ, ಸಂಸ್ಕಾರಗಳಿಗೆ ತಕ್ಕಂತೆ ಓದುಗರಲ್ಲಿಯೂ ಅವರವರ ಮಟ್ಟಗಳಿವೆ.[೬] ಕೆಲವೊಂದು ಮಟ್ಟದ ವಾಚಕರ ಗಮನ ಈಗ ನವ್ಯಕಾವ್ಯದತ್ತ ಹರಿದಿದೆಯೆನ್ನುವದರಲ್ಲಿ ಸಂಶಯವಿಲ್ಲ. ಅವರಲ್ಲಾದರೂ ಆ ಬಗ್ಗೆ ಪರಸ್ಪರ ಚರ್ಚೆ-ಸಂವಾದ-ವಾಚನ ಹೆಚ್ಚಾಗಿ ನಡೆದಷ್ಟೂ ಒಳ್ಳೆಯದು. ಓದುಗರ ತಿಳಿವಳಿಕೆಯೂ ತಿಳಿಯಾಗಿ, ಕವಿಗಳ ಕಲಾವಂತಿಕೆಯೂ ಒಂದು ಹದಕ್ಕೆ ಬಂದಾಗ, ಎಲ್ಲವೂ ಸರಿಹೋಗಬಹುದು ಎಂದು ಆಶಿಸೋಣ.

ಕವಿಗಳಲ್ಲಿಯೇ ನವ್ಯಕಾವ್ಯದ ಬಗ್ಗೆ ಉಂಟಾಗಿರುವ ಪ್ರತಿಕ್ರಿಯೆಯನ್ನೂ ಗಮನಿಸಬಹುದು. ಹಿರಿಯ ತಲೆಮಾರಿನ ಕವಿಗಳು ಸಾಮಾನ್ಯವಾಗಿ - ಒಬ್ಬಿಬ್ಬ-ರನ್ನುಳಿದು - ನವ್ಯಕಾವ್ಯದ ಧೋರಣೆಯನ್ನು ವಿರೋಧಿಸುವವರೇ ಆಗಿದ್ದಾರೆ.

---

೬. "The public thinks It chooses its authors ; not at all ; it is the artist who chooses his public ; one is always worthy of the other ..... To scorn the vulgar public is to esteem certain individuals the more. Where is one to find them ? It is only in the long sequence of time thnt they can of themselves make their choice, one here, another there, each of them solitary. Slowly, through successive generations is formed a public that is itself admirable." Andre Gide, *Pretexts*, page 130.

ಕೆಲವರು ಅದರಲ್ಲಿ ಕೃತಿ-ವಿಕೃತಿ ಎರಡನ್ನೂ ಕಂಡಿದ್ದಾರೆ, ಹಾಗೂ ತಮ್ಮ ಪರಂಪ-ರಾನುಗತಿಯಲ್ಲಿ ಮುಂದುವರಿದಿದ್ದಾರೆ. ಕೆಲವೊಂದು ನವ್ಯ ಕೃತಿಗಳಲ್ಲಿಯ ಲಯಗತಿಯನ್ನೂ ಲಯಶಿಲ್ಪವನ್ನೂ, ರಚನೆಯ ತಂತ್ರದಲ್ಲಿಯ ಹೊಸಮಾರ್ಗ-ಗಳನ್ನೂ ಶಕ್ತಿಯನ್ನೂ ಮೆಚ್ಚಿಕೊಂಡರೂ, "ಇದರಲ್ಲಿ ಒಂದು ಪಂಗಡ ಸೌಂದರ್ಯದ ಬದಲು ವಿಕಾರದ ಕಡೆಗೆ, ಸಾಮರಸ್ಯಕ್ಕಿಂತ ವಿಷಮತೆಯ ಕಡೆಗೆ, ಶಾಂತಿ-ಸಮಾಧಾನಗಳಿಗಿಂತ ಉದ್ವೇಗದ ಕಡೆಗೆ, ತಿಳಿಗಿಂತ ಕದಡಿನ ಕಡೆಗೆ, ಸರಳತೆಗಿಂತ ಚಪಲತೆಯ ಕಡೆಗೆ, ಭಾವಾರ್ಥಗಳ ಏಕಸೂತ್ರತೆಗಿಂತ ಬಹುಗಮನದ ಕಡೆಗೆ, ನಾಟಕೀಯತೆ, ಅಣಕಗಳ ಕಡೆಗೆ ಓಲುತ್ತದೆ. ಒಂದು ಅಂಸಂತೃಪ್ತಿಯೂ, ಭಂಗವೂ ಇದರ ಮನಸ್ಸನ್ನು ಕಹಿ ಮಾಡಿಸಿದೆ. ನಿಜವಾದ ಲೋಕಾನುಭವವಿಲ್ಲದೆ ಈ ತಂತ್ರ-ವನ್ನು ಬಳಸಿದವರಲ್ಲಿ ಬರಿಯ ಕೆಂಬೂತವೃತ್ತಿ ಕಾಣುತ್ತದೆ[೧]" ಎಂದು ಅಭಿಪ್ರಾಯ ಪಡುತ್ತಾರೆ ತರುಣ ಕವಿಗಳಲ್ಲಿ ಕೆಲವರು ಭಾವಗೀತೆ ಹಾಗೂ ನವ್ಯಕವಿತೆ ಎರಡರ ಮಿತಿಯನ್ನೂ ಅರಿತುಕೊಂಡು ಅವುಗಳನ್ನು ಸಮನ್ವಯ-ಗೊಳಿಸಲು ಯತ್ನಿಸುತ್ತ ಹೊಸಪಾಕವೊಂದನ್ನು ಸೃಷ್ಟಿಸುತ್ತಿದ್ದಾರೆ. ಈ ಮೊದಲು ಭಾವಪ್ರಧಾನ ಕಾವ್ಯದಲ್ಲಿ ಸಾಕಷ್ಟು ಕೃಷಿಗೈದು ಈಗ ನವ್ಯದ ಕಡೆಗೆ ಒಲಿದ ಕವಿಗಳ ಶೈಲಿಯಲ್ಲಿ ಸಹಜವಾಗಿಯೇ ಒಂದು ಹದ ಕಂಡುಬರುತ್ತಿದೆ. ಹೊಸ-ಪೀಳಿಗೆಯ ಕವಿಗಳನ್ನು ನವ್ಯತೆ ಸಹಜವಾಗಿಯೇ ಆಕ್ರಮಿಸಿಕೊಂಡಿದೆ. ಅವರಲ್ಲೂ ಪರಸ್ಪರ ಪ್ರಭಾವದಿಂದ ಪ್ರಯೋಗಪ್ರಿಯತೆ ಕಂಡುಬರುತ್ತಿದೆ.

ಅದೇನೇ ಇದ್ದರೂ, ಇಂದಿನ ಹೊಸ ಜಗತ್ತನ್ನು, ಅದರ ಎಲ್ಲ ಜಟಿಲತೆ-ಯನ್ನು, ಕ್ಲಿಷ್ಟತೆಯನ್ನು, ವಿರೋಧಾಭಾಸವನ್ನು, ಅನುಭವದ ಸಂಕೀರ್ಣತೆ-ಯನ್ನು, ಆಧುನಿಕ ಮನುಷ್ಯನ ಅಂಜಿಕೆ, ನಿರಾಶೆಗಳನ್ನು ನವ್ಯಕವಿತೆ ನೈಜವಾಗಿ, ಪ್ರಾತಿನಿಧಿಕವಾಗಿ ಚಿತ್ರಿಸಬಲ್ಲುದು. ಇದೆಲ್ಲದರ ಭಾರವನ್ನು ಸರಿಯಾಗಿ ನಿರ್ವಹಿಸು-ವಂತೆ ಭಾಷೆಯಲ್ಲಿ ಹೊಸ ಜೀವವನ್ನು ತುಂಬಿ, ಅದನ್ನು ಹದನುಗೊಳಿಸಿ ಭಾವಾಭಿವ್ಯಕ್ತಿಗೆ ಯೋಗ್ಯ ಸಾಧನವಾಗುವಂತೆ ನವ್ಯಕವಿ ನೋಡಿಕೊಳ್ಳುತ್ತಾನೆ. ತನ್ನ ಅನುಭವಕ್ಕೆ ಬೇರೆ ಬಣ್ಣವನ್ನು ಬಳಿಯಲು ಹೋಗದೆ, ಅದಕ್ಕೆ ವಿವರಣೆಯನ್ನು ಕೊಡದೆ, ತಾತ್ವಿಕ ಮುಸುಕಿನಲ್ಲಿ ಮರೆಯಾಗಿಸದೆ, ತನ್ನತನದ ಕಲಾಪಂಕ್ತಿಕೆ-ಯನ್ನು ಆದಷ್ಟು ಶುದ್ಧರೂಪದಲ್ಲಿ ಉಜ್ವಲವಾದ ಪ್ರತಿಮೆ, ಸಂಕೇತಗಳಲ್ಲಿ, ಧ್ವನಿಯ ಏರಿಳಿತದಲ್ಲಿ, ನಾಟಕೀಯತೆಯಿಂದ ತನ್ನದೇ ಆದ ಛಂದಸ್ಸಂಗೀತದಲ್ಲಿ ಪ್ರತ್ಯಕ್ಷಗೊಳಿಸುತ್ತಾನೆ. ಸಾಮಾಜಿಕ ಸಮಸ್ಯೆಗಳಲ್ಲಿ ಪೂರ್ಣ ಮುಳುಗೇಳದೆ ತನ್ನ

---

೧. ವೀ. ಸೀ. 'ಹೆಜ್ಜೆಪಾಡು' ಮುನ್ನುಡಿ

ವ್ಯಕ್ತಿತ್ವದ ಅಂಚಿನಲ್ಲಿ ನಿಂತು ಮಾನವೀಯ ತಿಳಿವಳಿಕೆ, ಸಹಾನುಭೂತಿ, ಸೂಕ್ಷ್ಮ ನಿರೀಕ್ಷಣೆಗಳಿಂದ ಅದನ್ನು ಅನುಭವಿಸಿ, ನಿರೂಪಿಸುತ್ತಾನೆ.[೧]

ನಮ್ಮ ರೋಮ್ಯಾಂಟಿಕ್ ಸಂಪ್ರದಾಯದ ಕವಿಗಳಲ್ಲಿ ಅತ್ಯುತ್ತಮರಾದ ಕೆಲವರು ಕೊಟ್ಟ ಹಾಗೆ ನಮ್ಮ ಇಂದಿನ ಸ್ಥಿತಿಗತಿಯ ನಿರ್ಣಾಯಕ ಪ್ರತಿಮೆಯನ್ನೂ ಕೊಡಬಲ್ಲ ಹಾಗೂ ನಾವು ಮುಂದೆ ಪಡೆಯಬಹುದಾದುದರ ಪ್ರವಾದೀ ಪ್ರತಿಮೆ-ಯನ್ನೂ ಸೃಷ್ಟಿಸಬಲ್ಲ ಕವಿಯನ್ನು ನಾವೀಗ ಎದುರು ನೋಡುತ್ತಿದ್ದೇವೆ. ನಮ್ಮ ಬದುಕಿನ ಪ್ರವೃತ್ತಿಗಳ ಮೇಲೆ ತನ್ನ ಮುದ್ರೆಯನ್ನೊತ್ತಬಲ್ಲ ಹಾಗೂ ತನ್ನ ಒಳ-ಗಣ್ಣಿನ ತೀಕ್ಷ್ಣತೆಯಿಂದ ಆ ಪ್ರವೃತ್ತಿಗಳನ್ನು ಬದಲಿಸಬಲ್ಲ ಕವಿತೆ ಇನ್ನು ಮುಂದೆ ಬರಬಹುದೆಂದು ಆಶಿಸುತ್ತೇವೆ. ಮುಂದಿನ ಹತ್ತು ವರ್ಷಗಳಲ್ಲಿ, ನಮ್ಮಲ್ಲಿ ಈಗ ನಡೆದಿರುವ ನವ್ಯಕಾವ್ಯದ ಪ್ರಯೋಗಕ್ಕೆ ಒಂದು ನಿಶ್ಚಿತ ಸ್ವರೂಪ ಬರಬಹುದಾದ್ದ-ರಿಂದ ಅದರ ಬೆಲೆಯನ್ನು ಈಗಲೇ ಕಟ್ಟುವದು ಅಷ್ಟೊಂದು ಯೋಗ್ಯವಾಗಲಾರದು. ಎಲ್ಲ ಮಾರ್ಗದ ಕಾವ್ಯಕ್ಕೂ ಅದರದೇ ಆದ ಅಡೆತಡೆಗಳಿರುವದು ಸ್ವಾಭಾವಿಕ. ಒಂದು ಬಂಧನದಿಂದ ಬಿಡುಗಡೆ ಪಡೆದು ತನ್ನದೇ ಆದ ದಾರಿಯನ್ನೂ, ರೂಪವನ್ನೂ ಕಂಡುಕೊಳ್ಳುತ್ತಿರುವ ಕನ್ನಡ ನವ್ಯಕಾವ್ಯ ತನ್ನ ಮಾರ್ಗದ ಅಡ್ಡಿ ಆತಂಕಗಳನ್ನೂ ಎದುರಿಸಿ ಕಾಲಕ್ರಮೇಣ ಒಳ್ಳೆಯ ಕೃತಿಗಳನ್ನು ಕೊಡಬಲ್ಲುದು ಎನ್ನುವಲ್ಲಿ ಸಂದೇಹವಿಲ್ಲ.

೫

ಕನ್ನಡದ ಕಾವ್ಯಮಾರ್ಗವನ್ನು ಅವಲೋಕಿಸಿದರೆ ಅದು ಪರಂಪರೆಯಿಂದ ಪರಂಪರೆಗೆ ತನ್ನ ಜೀವರಸವನ್ನು ಹೊಯ್ಯುತ್ತಲೇ ಇರುವುದನ್ನು ಕಾಣಬಹುದು.

---

೧. "The business of poetry is not to simplify or to explain but to present....What matters to the modern poet is the essential excitement, the exaltation and thrill which he finds, not a preconceived general notion of what the subjects of poetry are or not.....Their work in consequence may often be lacking in sweetness, but sweetness is not the only test of poetry. Modern poets have sometimes ventured into distressing and confused corners of experience because they hear in them the authentic call of the creative spirit...... The new poetry is not very succulent, but it is healthy"

C. M. Bowra "The Creative Experiment"

ಒಂದು ಸಂಪ್ರದಾಯದ ಅವನತಿಯ ಕಾಲದಲ್ಲಿ ಹಾಗೂ ಮತ್ತೊಂದು ಸಂಪ್ರದಾಯ ಸ್ಥಿರವಾಗಿ ರೂಪುಗೊಳ್ಳುವ ಪೂರ್ವದಲ್ಲಿ ಅದರ ಗತಿ ಕೆಲಮಟ್ಟಿಗೆ ಕುಂಠಿತವಾದಂತೆ ಕಂಡು ಬಂದರೂ, ಅದು ಮುಂದೆ ಅಲ್ಪಾವಕಾಶದಲ್ಲಿಯೇ ಹೊಸ ನೀರನ್ನು ತುಂಬಿ-ಕೊಂಡು ಹೊಸ ರಭಸದಲ್ಲಿ ಮುಂದುವರಿಯುತ್ತ ಬಂದಿದೆ ಕಳೆದ ಮೂರು ನಾಲ್ಕು ವರ್ಷಗಳಲ್ಲಿ ಪ್ರಕಟವಾಗಿರುವ ಕವನ ಸಂಗ್ರಹಗಳನ್ನು — ಅವು ಮೂವತ್ತಕ್ಕೂ ಮೇಲ್ಪಟ್ಟಿವೆ — ನವ್ಯ-ಅನವ್ಯ ಎನ್ನುವ ಧೋರಣೆಯನ್ನಿಟ್ಟು-ಕೊಳ್ಳದೆ, ಆಯಾ ಕಾವ್ಯಮಾರ್ಗದ ಹಿನ್ನೆಲೆಯಲ್ಲಿಯೇ ಅವುಗಳನ್ನು ಪರಿಶೀಲಿಸಲು ಇಲ್ಲಿ ಹವಣಿಸಿದ್ದೇನೆ. ಈ ಅವಧಿಯಲ್ಲಿ ಪ್ರಕಟವಾಗಿರುವ ಎಲ್ಲ ಕವನ ಸಂಗ್ರಹ-ಗಳನ್ನೂ ಇಲ್ಲಿ ಒಳಗೊಂಡಿದೆಯೆಂದಾಗಲಿ, ಇಲ್ಲವೆ ಇಲ್ಲಿ ಹೇಳಿರುವ ಮಾತುಗಳು ಅವುಗಳ ಸಂಪೂರ್ಣ ವಿಮರ್ಶೆಯೆಂದಾಗಲಿ ಯಾರೂ ಭಾವಿಸಬಾರದು.

‘ ಅರಳು-ಮರಳಿ ’ ನ ನಂತರ ಬೇಂದ್ರೆಯವರ ನಾಲ್ಕು ಕವನ ಸಂಗ್ರಹ-ಗಳು—‘ನಮನ’, ‘ಸಂಚಯ’, ‘ಉತ್ತರಾಯಣ’, ‘ಮುಗಿಲ ಮಲ್ಲಿಗೆ’— ವರುಷ-ಕ್ಕೊಂದರಂತೆ ಪ್ರಕಟವಾಗಿವೆ. ಈ ನಾಲ್ಕು ಸಂಗ್ರಹಗಳೂ ಅವರ ಉಳಿದ ಕವನ ಸಂಗ್ರಹಗಳಂತೆಯೇ ಸಂಕೀರ್ಣ ಸ್ವರೂಪದವಾಗಿವೆ. ಬಹಳ ಪೂರ್ವದಲ್ಲಿಯೇ ಬರೆದ ಕವನಗಳ ಜೊತೆಗೆ ಹೊಚ್ಚಹೊಸ ಕವನಗಳೂ ಸೇರಿಕೊಂಡಿವೆ. ‘ ಸಂಚಯ ’ ದಲ್ಲಿ : ‘ ಮೂರು ಆರರ ಪ್ರಾಯದಲ್ಲಿಯೆ ಮೂಡಿದವು ನವ-ಭಾವನೆ । ಆರು ಮೂರಕೆ ಮೋರೆ ತಿರುವಿರೆ ಉಣಿವೆ ಅಂದಿನ ಕಾವನೆ ’ ಎಂದಿದ್ದಾರೆ. ಅಂತೆಯೇ ಅವರ ಕಾವ್ಯದ ಆಶಯ ಮೊದಲಿನಿಂದ ಕೊನೆಯವರೆಗೂ ಧಾರೆ ಹಿಡಿದಿದೆ. ‘ ಮುಗಿಲ ಮಲ್ಲಿಗೆ ’ ಯಲ್ಲಿ ರವೀಂದ್ರರಿಗೆ ಸಂಬಂಧಿಸಿದ ಅನೇಕ ಕವನಗಳು ಬಂದಿವೆ. ಆದರೂ ಅವು ಒಂದರಂತೆ ಒಂದಿಲ್ಲ. ಬೇಂದ್ರೆಯವರ ಸ್ವತಂತ್ರವಾದ ಕಾವ್ಯಶಕ್ತಿ ಅಪ್ರತಿಹತವಾಗಿರುವದೇ ಇದಕ್ಕೆ ಕಾರಣ ಸಂವೇದನೆ-ಯಲ್ಲಿ, ಅಭಿವ್ಯಕ್ತಿಯಲ್ಲಿ ಅದು ಎಂದಿನಂತೆ ಚೈತನ್ಯಪೂರ್ಣವಾಗಿಯೇ ಇದೆ. ‘ ಉತ್ತರಾಯಣ ’ ದ ನವೀನ ಕವನಗಳಲ್ಲಿ ಕೆಲಮಟ್ಟಿಗೆ ಶೈಥಿಲ್ಯವುಂಟಾಗಿರುವದ-ರಿಂದ ಶಬ್ದಶ್ಲೇಷೆ ತನ್ನ ಮೊದಲಿನ ಕಾವನ್ನು ಕಳೆದುಕೊಂಡಿರುವಂತೆ ಭಾಸವಾಗುತ್ತದೆ ಬೆಂಕಿಯೊಳಗಿದ್ದ ಗುಣವನ್ನು ಬಿಸಿನೀರಿನಲ್ಲಿಯೂ ಬಯಸುವದು ತಪ್ಪಾದೀತು.

‘ ನವ್ಯಕವಿತೆಗಳು ’ ಸಂಗ್ರಹದಿಂದ ಮತ್ತೊಂದು ದಿಸೆಯಲ್ಲಿ ಓದುಗರಿಗೆ ಹೊಸ ಪ್ರಯೋಗಗಳ ರುಚಿಯನ್ನು ತೋರಿಸಿದ ವಿನಾಯಕರು (ವಿ. ಕೃ. ಗೋಕಾಕ) ‘ ಉಗಮ ’ ಮತ್ತು ‘ ದ್ಯಾವಾಪೃಥಿವಿ ’ ಗಳಲ್ಲಿ ತಮ್ಮ ಪ್ರತಿಮಾದೃಷ್ಟಿಗೆ

ನವೀನ ರೂಪವನ್ನು ಕೊಟ್ಟು ನೋಡಿದ್ದಾರೆ. ಬಾನುಬುವಿಗಳ ವಿಸ್ತಾರಕ್ಕೆ ಪ್ರಸ್ತಾ-ರವನ್ನು ಬರೆದು, ಹಕ್ಕಿ ತನ್ನ ಗೂಡಿಗೆ ಮರಳಿ, ಮೊಟ್ಟೆಯ ಮೇಲೆ ಕಾವುಕೂರುವಂತೆ ಇವರ ಕಾವ್ಯವಾಣಿ ಮತ್ತೆ ಮತ್ತೆ ಧ್ಯಾನಸ್ಥವಾಗುವುದನ್ನು ಮರೆತಿಲ್ಲ. ' ಊರ್ಣ-ನಾಭ ' ದಲ್ಲಿಯೂ ಅವರ ಚಿಂತನೆಯ ಹಂತ ಹಂತವನ್ನೂ, ತಂತು ತಂತುವನ್ನೂ ಎಣಿಸಬಹುದು. ಇವರ ಕವಿತೆಗಳಲ್ಲಿ, ವಿಚಾರದ ಹಂದರದ ಮೇಲೆ ಕಾವ್ಯದ ಬಳ್ಳಿ ಸೊಂಪಾಗಿ ಬೆಳೆಯದಿರುವದು ಒಮ್ಮೊಮ್ಮೆ ಕೊರತೆಯಾಗಿ ಕಂಡುಬಂದರೂ, ಇವರ ಕಾವ್ಯದ ಉದ್ದೇಶಕ್ಕೆ ಭಂಗಬರುವಂತೆ ತೋರುವುದಿಲ್ಲ. ವಸ್ತುವಿನಲ್ಲಿ ಹೊಸತನ ಸಾಕಷ್ಟಿದ್ದರೂ, ಅದು ಒಂದು ಶಿಸ್ತಿಗೆ ಒಳಪಟ್ಟು ಇವರ ಕಾವ್ಯದಲ್ಲಿ ರೂಪು-ಗೊಳುತ್ತದೆ. ಆದುದರಿಂದ, ಅವರ ಕಾವ್ಯಶೈಲಿಯ ಚುರುಕು ಅಲ್ಲಲ್ಲಿ ತಟ್ಟಿದರೂ, ಓದುಗರನ್ನು ದಿಗ್ಭ್ರಮೆಗೊಳಿಸುವದಿಲ್ಲ.

' ಜೀವದ ಸರಪಣಿಯಿದು ಉದ್ದ, ಉದ್ದುದ್ದ ', ' ಅಲ್ಲ ಕರುಣೆ ತಪತಪ ತೋಯಿಸುವ ಮಳೆ, ಅದಕಿದೆ ಬೇರೆ ಕಳೆ ' ' ವ್ಯಕ್ತಿತ್ವದ ಉಗಮವಿಲ್ಲಿ, — ಪಾಪ-ಕರುಣೆ ಹೊಂದಿದಲ್ಲಿ ' ಇವೇ ಮೊದಲಾದ ಸಾಲುಗಳಲ್ಲಿ ಅವರ ಕಾವ್ಯದ ಕಾಣ್ಕೆ ಸಹಜವಾಗಿ ಸೂಚಿತವಾಗುತ್ತದೆ. ಗಂಭೀರವಾದ ನಡಿಗೆ ಅವರ ಕಾವ್ಯಶೈಲಿಯ ಮತ್ತೊಂದು ಮುಖ :

> **" ಓರ್ವ ಬೆಂಗದಿರನನೆ ತಾನು ಸುತ್ತಿದರೂ**
> **ಓರ್ವ ತಂಗದಿರನೆಡೆ ಕಣ್ಣನೆತ್ತಿದರೂ**
> **ಬಾಳಿಹಳು ಕೋಟಿ ಚಂದ್ರರ ಕನಸು ಕಂಡು**
> **ತಾಯಿ ಭೂದೇವಿ.**
> **ಬೆಳೆದಿಹಳು ಕೋಟಿ ಸೂರ್ಯರ ನನಸನುಂಡು "**
>
> **(' ಭಾರತಿಯ ಕಾರ್ಯಗೌರವ ')**

' ನಲ್‌ವಾಡು ' ಗಳಲ್ಲಿ ಆನಂದಕಂದರು ಸುಂದರವಾದ ಜಾನಪದ ಪ್ರೀತಿ ಗೀತಗಳನ್ನು ಅವುಗಳ ಸಹಜತೆ ಕೆಡದಂತೆ ಕೊಟ್ಟದ್ದಾರೆ. ಈ ದಿಸೆಯಲ್ಲಿ ಇವರಿಂದ ಇನ್ನೂ ಹೆಚ್ಚಿನ ಕಾಣಿಕೆಗಳನ್ನು ಅಪೇಕ್ಷಿಸಬಹುದಾಗಿದೆ. ' ನನ್ನ ಮನಸ್ಸು ದಿನ ಜೀವನಕ್ಕೆ ಮಣಿಯುತ್ತದೆ. ಇಲ್ಲಿನ ನೋವು, ನಿರಾಶೆ, ಪ್ರೀತಿ, ಔದಾರ್ಯ, ಸ್ನೇಹದ ನೆರವು, ಕಾರುಣ್ಯ ನನಗೆ ತುಂಬಾ ಪ್ರಿಯ ' ಎಂಬುದಾಗಿ ' ಹೆಜ್ಜೆ-ಪಾಡಿ ' ನಲ್ಲಿ ವೀ. ಸೀ. ಹೇಳಿಕೊಂಡಿದ್ದಾರೆ. ಜೊತೆಗೆ ರೂಪಾಂತರಗೊಂಡ ಭಾರತದ ಬದುಕು ಈ ಸಂಗ್ರಹದಲ್ಲಿ ಸ್ವಲ್ಪಮಟ್ಟಿಗೆ ಪ್ರತಿಬಿಂಬಿಸಿದೆ. ಈ ಸಂಗ್ರಹ ' ದ್ರಾಕ್ಷಿ ದಾಳಿಂಬೆ ' ಗಿಂತ ಮುಂದಿನ ಹೆಜ್ಜೆಯಾದರೂ, ಬರವಣಿಗೆ ಮೊದಲಿ-

ನಂತೆಯೇ ನೇರವಾದುದು. ‘ ನಮ್ಮ ಕವಿತೆಯನ್ನು ರೋಮ್ಯಾಂಟಿಕ್ ಎಂದು ಕರೆದು ಪ್ರೀತಿಯಿಲ್ಲದ ಮಾತನ್ನಾಡುವವರುಂಟು ’ ಎಂಬ ನೋವು ಅವರ ಮುನ್ನುಡಿಯ ಉದ್ದಕ್ಕೂ ಹರಿದಿದೆ ಅವರವರ ದಾರಿಯು ಕಾಣ್ಕೆ ಅವರವರದು. ಆದುದರಿಂದ ಇಷ್ಟೊಂದು ಅಸಮಾಧಾನಕ್ಕೆ ಇಲ್ಲಿ ಕಾರಣವಿರಲಿಲ್ಲ ಎಂದು ತೋರುತ್ತದೆ ‘ ಹೃದಯ ವಿಹಾರಿ ’ ಯಲ್ಲಿ ಪು. ತಿ. ನ. ಅವರು ಮೊದಲಿನ ವೇಷದಲ್ಲಿಯೇ ಹಲವು ಹಾಡುಗಳನ್ನೂ ಕವನಗಳನ್ನೂ ಕೊಟ್ಟಿದ್ದಾರೆ. ಅವರದೇ ಆದ ಗೀತಗುಣ ಇವುಗಳಲ್ಲಿ ಅಲ್ಲಲ್ಲಿ ಕಂಡುಬರುತ್ತಿದ್ದರೂ, ಬಣ್ಣಗಾರಿಕೆಯಲ್ಲಿ ಹಿಂದೆ ಬಿದ್ದು ಒಂದು ರೀತಿ ಜಡವಾಗಿವೆ. ‘ ಆ ಮರ ’ ಎಂಬ ಕವಿತೆಯ ಛಂದದಲ್ಲಿ ಇವರು ತಮ್ಮ ಕವನಗಳ ಇನ್ನು ಮುಂದಿನ ಮುಂಬರಿವನ್ನು ಸೂಚಿಸಿದ್ದಾರೆ. ಬಹುಶಃ ಓದುಗರೂ ಅದನ್ನೇ ಅಪೇಕ್ಷಿಸಿಯಾರು. ದಿನಕರ ದೇಸಾಯಿಯವರ ‘ ಭತ್ತದ ತೆನೆ ’ ಯು ಬಿಡಿಗವಿತೆಗಳು ಹುಲುಸಾಗಿವೆ. ಸಾಮಾಜಿಕ ರಾಜಕೀಯ ಜೀವನದ ಅವರ ವಿಡಂಬನೆ ಭತ್ತದ ಕವಚದಂತೆಯೇ ಚೂಪಾಗಿದ್ದರೂ ಅದರಲ್ಲಿ ಬಾಳಿಗೆ ಅನ್ನವನ್ನೊ-ದಗಿಸಬಲ್ಲ ಉತ್ತರ ಕನ್ನಡ ಜಿಲ್ಲೆಯ ‘ ಹಳಗನ ’ ಅಕ್ಕಿ ಇದೆ.

ಯಸ್. ವೆಂಕಟರಾಜರ ‘ ಮಾನಸ ಗಂಗೆ ’ ಅವರ ಕಾವ್ಯರಚನಾ ವೈಪುಲ್ಯವನ್ನು ಎತ್ತಿತೋರಿಸುತ್ತದೆ. ಇಲ್ಲಿಯ ಕವನಗಳ ಛಂದಸ್ಸು ಗತಾನುಗತಿಕ-ವಾಗಿದ್ದರೂ, ಭಾವದ ಒತ್ತಡ ಸಾಕಷ್ಟಿದೆ. ‘ ಎನಿತೊ ಪದರಿನ ಹೊದಿಕೆಯುಲಿ ಬಚ್ಚಿಟ್ಟ ಬದುಕಿನ ಮಾಣಿಕ ’ ಅವರ ಕವನಗಳಲ್ಲಿ ಅಲ್ಲಲ್ಲಿ ಹೊಳೆಯುತ್ತದೆ. ‘ ಮಾನಸ ಸರೋವರ ’ ಕಾವ್ಯಾನಂದರ ( ಸಿದ್ಧಯ್ಯ ಪುರಾಣಿಕ ) ಹಲವಾರು ಕಾವ್ಯಗುಣಗಳಿಗೆ ಕನ್ನಡಿ ಹಿಡಿದಿದೆ. ಅವರ ಸ್ವತಂತ್ರವಾದ ಕಲ್ಪನಾಶಕ್ತಿ ಹಿಂದಿನ ಎರಡು ಕವನ ಸಂಗ್ರಹಗಳಂತೆ ಇಲ್ಲಿಯೂ ತೀವ್ರತೆಯನ್ನು ಪಡೆದಿದೆ. ಇವರ ಶಬ್ದಸಂಪತ್ತು ಅದ್ಭುತವಾದುದು. ಆದರೆ ಅದರ ಬಳಕೆಯಲ್ಲಿ ಅಷ್ಟೇ ಹಿತ-ಮಿತ-ವನ್ನು ಸಾಧಿಸುವದು ಅಗತ್ಯ. ಇವರ ಕವನಗಳಲ್ಲಿ ‘ ಎಲ್ಲೊ ಒಂದೆಡೆ ಭಾವ-ಬುದ್ಧಿಯು ಹಸೆಗೆ ನಿಲ್ಲುವ ಹಾಗಿದೆ ’ — ಆಗಿನ ಸಂದರ್ಭಗಳಲ್ಲಿ ಅದಕ್ಕೆ ಇನ್ನಿಲ್ಲದ ಸೌಂದರ್ಯವೂ ಅರ್ಥವಂತಿಕೆಯೂ ಒದಗಿರುತ್ತವೆ. ಬಿ. ಎಚ್. ಶ್ರೀಧರರ ‘ ಮಂಜುಗೀತ ’ ದಲ್ಲಿ ಇಂದಿನ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ – ಎಲ್ಲ ವಿಷಯಗಳ ಸಂವೇದನೆ ತುಂಬಿಕೊಂಡಿದ್ದರೂ, ಅವರು ಉಪಯೋಗಿಸುವ ನಾನಾ ಬಗೆಯ ಶೈಲಿಗಳು ಮೂಲ ವಿಗ್ರಹವನ್ನು ಮರೆಮಾಡಿಬಿಡುತ್ತವೆ. ಕಯ್ಯಾರಕಿಞ್ಞಣ್ಣರೈ ಅವರ ‘ಪುನರ್ನವ’ ಅವರ ಹಿಂದಿನ ಸಂಕಲನಗಳ ಮಾದರಿ-ಯಲ್ಲಿಯೇ ಇದ್ದು, ಹೆಚ್ಚಿನ ಪ್ರಗತಿಯನ್ನು ಕಂಡುಕೊಂಡಿಲ್ಲ.

ಕೆ. ಎಸ್. ನರಸಿಂಹಸ್ವಾಮಿಯವರ ಇಂದಿನ ಕಾವ್ಯರಚನೆ ಹೆಚ್ಚಿನ ವಿಸ್ತಾರವನ್ನೂ, ಶಕ್ತಿಯನ್ನೂ ಒಳಗೊಳ್ಳುತ್ತಿದೆ. ಅದು ತನ್ನ ಮೊದಲಿನ ಚೆಲುವಿನ ನಿಲವನ್ನು ಕಳೆದುಕೊಳ್ಳದೆ, ಕಲಾಕೌಶಲ್ಯದಲ್ಲಿ ಒಂದಿಷ್ಟೂ ಮರವೆಯನ್ನು ತೋರ್ಪಡಿಸದೆ, ಹೊಸ ಬದುಕಿನ ಹವಕ್ಕೆ ಸರಿಯಾಗಿ, ಭಾಷೆ, ನುಡಿಕಟ್ಟನ್ನು ಕಲಾತ್ಮಕವಾಗಿ ಬಳಸಿಕೊಂಡು ಮುಂದುವರಿಯುತ್ತಿದೆ. 'ಶಿಲಾಲತೆ', 'ಮನೆಯಿಂದ ಮನೆಗೆ' ಸಂಗ್ರಹದಲ್ಲಿಯ ಕೆಲವು ಕವಿತೆಗಳು ಅವರ ಹೊಸ ಮನೋಧರ್ಮವನ್ನು ಚೆನ್ನಾಗಿ ಪ್ರತಿಬಿಂಬಿಸುತ್ತವೆ. 'ಪದ ಪದಕವಿಲ್ಲ, ತಲೆ ಭಾರವಿಲ್ಲ, ನಿಮ್ಮುಸಿರು ನನ್ನ ಕವಿತೆ' ಎಂಬ ಅವರ ಮಾತು ಸತ್ಯಪೂರ್ಣವಾಗಿದೆ. 'ಇಹದ ತಳಹದಿಯಿಂದ ದಿಟದ ದರ್ಶನವರಳಿ ಹಂಬಲಿಸಿ ಹಾಡಾಗಬೇಕು' ಎಂಬ ಅವರ ಪ್ರಾಮಾಣಿಕ ದರ್ಶನ ವಿಚಾರವಂತಿಕೆಯ ಬೆಳವಣಿಗೆಯಿಂದ ಕೂಡಿದೆ. "ಆದರೆ, ಅವರ ಅನುಭವ ತೆಳು, ಪರಿಮಿತ. ಅದಕ್ಕೆ ವ್ಯಾಪ್ತಿಯಿಲ್ಲ. ಜೀವನದ ಮೇಲೆ ಮೇಲೆಯೇ ತೇಲುವ ಕವಿ ಅವರು. ಬಾಳಿನೊಳಹೊಕ್ಕು ಆಳವನ್ನು ನೋಡುವ ಕಣ್ಣು ಅವರಿಗಿಲ್ಲ" (ಅಡಿಗ) ಎಂಬ ಅಭಿಪ್ರಾಯದ ಪುನರ್ವಿಮರ್ಶೆಗೆ ಈ ಎರಡು ಸಂಗ್ರಹಗಳು ಸ್ವಲ್ಪಮಟ್ಟಿಗೆ ಅವಕಾಶವೀಯಬಹುದಾಗಿದೆ. ನರಸಿಂಹಸ್ವಾಮಿಯವರು ಜೀವನವನ್ನು ನೋಡುವದೃಷ್ಟಿ 'ನಾ ಕಂಡ ಕನಸ' ದಲ್ಲಿ ಸುವ್ಯಕ್ತವಾಗಿದೆ. ಅದರ ಕೊನೆಯ ನುಡಿ ಇದು :

> **'ಹಾವಿಗೆಷ್ಟು ಸುಖ, ಹಕ್ಕಿಗಷ್ಟೆ ಸುಖ, ವೇಷ ಹುಲಿಯು ತೊಗಲು**
> **ಸುಖದುಃಖದಂಚು; ಸಂತೋಷವಿಂಚು; ಅಲ್ಲಿರಲು ಕಪ್ಪುಮುಗಿಲು**
> **ಕಡೆಗೆಲ್ಲ ಕರಗಿ ಉಳಿದೀತು ಗಗನ, ಎಲ್ಲೆಲ್ಲು ನೀಲಗಗನ;**
> **ಏನೇನು ನಡೆದರೂ ಅದರ ಕೆಳಗೆ ಇದು ನಾನು ಕಂಡ ಕನಸ.'**

ಕಳೆದ ಏಳೆಂಟು ವರ್ಷಗಳಿಂದ ನವ್ಯಕಾವ್ಯಮಾರ್ಗದಲ್ಲಿ ಅತ್ಯಂತ ಶ್ರದ್ಧೆಯಿಂದ ಕಾವ್ಯರಚನೆಗೆ ತೊಡಗಿರುವ ಗೋಪಾಲಕೃಷ್ಣ ಅಡಿಗರು ಅನನ್ಯವಾದ ರೀತಿಯಲ್ಲಿ ಕೃತಿನಿರ್ಮಾಣ ಕಾರ್ಯವನ್ನು ಮಾಡಿದ್ದಾರೆ. 'ಚಂಡೆಮದ್ದಳೆ'ಯ ನಂತರ ಬಂದಿರುವ 'ಭೂಮಿಗೀತ' ಅವರ ಮಹತ್ತರವಾದ ಸಾಧನೆಯ ಪ್ರತೀಕವಾಗಿದೆ. ನವ್ಯಕಾವ್ಯದ ಬಗೆ ಅವರು ಆಡಿರುವ ಮಾತುಗಳಲ್ಲಿಯೂ ಅವರ ಈ 'ಕೃತಿ'ಗಳಲ್ಲಿಯೂ ಇರುವ ಅಪೂರ್ವ ಹೊಂದಾಣಿಕೆ "ಇವರ ಕಾವ್ಯಸಿದ್ಧಾಂತ, ಜೀವನಸಿದ್ಧಾಂತ ಒಂದೇ ಕೇಂದ್ರದಿಂದ ಬಂದುದು" (ಯು. ಆರ್. ಅನಂತಮೂರ್ತಿ) ಎಂಬ ಸತ್ಯವನ್ನು ಮನಗಾಣಿಸಿಕೊಡುತ್ತದೆ. ಅನುಭವದ ಸಂಕೀರ್ಣ ಸ್ವರೂಪವನ್ನು ಪ್ರತಿಮಾ ಪ್ರಧಾನವಾಗಿ ರೂಪಿಸಿ, ಬಳಕೆ ಮಾತಿನ ಸ್ವಾರಸ್ಯವನ್ನೆಲ್ಲ ಅದಕ್ಕೆ ಧಾರೆಯೆರೆದು, ತನ್ನದೇ ಆದ

ಛಂದಸ್ಸಂಗೀತದಲ್ಲಿ ನೈದಾಳಿ ನಿಲ್ಲುವ, ಪ್ರತಿಯೊಂದು ಪದವನ್ನೂ ಸ್ಪಂದಿಸಿ ತೋರಬಲ್ಲ ಇವರ ಕವಿತಾ ಸಾಮರ್ಥ್ಯ ಕನ್ನಡ ಕಾವ್ಯದಲ್ಲಿ ಬೇರೆಲ್ಲಿಯೂ ಈ ರೀತಿ, ಇಷ್ಟೊಂದು ವೈಶಿಷ್ಟ್ಯಪೂರ್ಣವಾಗಿ ಕಾಣಸಿಗದು. ಅನುಭವದ ತೀವ್ರತೆ, ಆತ್ಮವಿಮರ್ಶೆ, ಸತ್ಯಾನ್ವೇಷಣೆಯ ಫಲ ಇವರ ಕಾವ್ಯದ ವೈಶಿಷ್ಟ್ಯಗಳಾಗಿವೆ. ಹೇಳುವ ರೀತಿಯಲ್ಲಿಯ ವ್ಯಂಗ್ಯ ನಾಟಕೀಯತೆಗಳು ಕವನದ ಒಟ್ಟು ಪರಿಣಾಮಕ್ಕೆ ಅದ್ಭುತವಾದ ರೀತಿಯಲ್ಲಿ ನೆರವಾಗುತ್ತವೆ. " ವ್ಯಕ್ತಿ-ಸಮಾಜ, ಭಾವ-ಬುದ್ಧಿ, ಮಾಂಸ-ಮನಸ್ಸು ಇವುಗಳ ಸಮನ್ವಯ ಕಾರ್ಯವೇ ನನ್ನ ಕಾವ್ಯ. ಎಲ್ಲಿಯವರೆಗೆ ಸಮನ್ವಯ ಸಾಧ್ಯವಾಗಿಲ್ಲವೋ ಅಲ್ಲಿಯವರೆಗೂ ಅದೇ ಕಾವ್ಯವಸ್ತು. ಪ್ರಕೃತಿ, ಕವಿ, ಸುತ್ತಣ ಸಮಾಜ-ಇವುಗಳು ತಾನೇ ಎಲ್ಲ ಕಾವ್ಯಗಳ ವಸ್ತು ?" ಎನ್ನುತ್ತಾರೆ ಅಡಿಗರು. ತಮ್ಮ ದೃಷ್ಟಿ ಬಹು-ಮಟ್ಟಿಗೆ Tragic ಎಂಬುದನ್ನು ಅವರು ಒಪ್ಪಿಕೊಂಡಿದ್ದಾರೆ. ಆದ್ದರಿಂದ 'ಎಲ್ಲೆಲ್ಲು ಹೆರಿಗೆಮನೆ, ಬೇನೆ, ಸಂಕಟ, ನಗೆ' ಎಂಬ ಸಂವೇದನೆ, ' ಈಡಿಪಸ್ಸಿನ ಗೂಢ ಪಾಪಲೇಪಿತನಾನು ' ಎಂಬ ಸತ್ಯಾನ್ವೇಷಣೆ, ಇವರ ಕಾವ್ಯದಲ್ಲಿ. ಈ ಹಿನ್ನೆಲೆಯಲ್ಲಿ ಅವರ ಕಾವ್ಯದ ಅಭ್ಯಾಸವನ್ನು ಮಾಡಿದರೆ ಅವರ ಕಾವ್ಯಹೃದಯದ ರುದ್ರಸೌಂದರ್ಯ ನಮಗೆ ಗೋಚರವಾಗುತ್ತದೆ.

ಅವರ ಭಾವನೆಯ ಉತ್ಕಟತೆಯನ್ನೂ, ತೀವ್ರತೆಯನ್ನೂ, ಜೊತೆಯಲ್ಲಿ ವೈಚಾರಿಕ ಬುದ್ಧಿಯ ಮಿಂಚನ್ನೂ ಈ ಸಾಲುಗಳು ಹೇಗೆ ಪ್ರತಿಧ್ವನಿಸುತ್ತವೆ ನೋಡಿ :

> **" ತೆಗೆದುಕೋ ನೀ ಕೊಟ್ಟ ಎಲ್ಲ ವಸ್ತ್ರವಿಲಾಸ :**
> **ಈ ಕೋಟು, ಈ ಶರಟು, ಈ ಶರಾಯಿ;**
> **ಈ ಭಗ್ನ ಜೋಪಡಿಯು ನಿನ್ನದೇ; ತೆಗೆದುಕೋ;**
> **ಬತ್ತಲಾಗದೆ ಬಯಲು ಸಿಕ್ಕದಿಲ್ಲಿ.**
> **ಅಲ್ಲದಿರೆ ಬೀದಿಯಲಿ ನಾ ಸರೀಕರ ಕೂಡೆ ತಲೆಯೆತ್ತಿ ನಡೆಯಲಾರೆ;**
> **ಬತ್ತಲಾಗದೆ ಕತ್ತಿಕಿತ್ತೆಸೆಯ ಬಲ್ಲುದೆ ಕವಚಕುಂಡಲ**
> **ಹೃದಯದಮೃತಕಲಶ ?**

[ ' ಭೂಮಿಗೀತ '—ಭಾಗ ೩ ]

ಸಮಕಾಲೀನ ಜೀವನದ ಅಸ್ತವ್ಯಸ್ತವನ್ನು ಚಿತ್ರಿಸುವ ಈ ಪ್ರತಿಮೆ :

"ಈಗ ಈ ಲೋಕ ಅಸ್ತವ್ಯಸ್ತ : ಗಡಿಯಾರ
ಬಿಚ್ಚಿ ಯಂತ್ರೋಪಯಂತ್ರಗಳ ಚೆಲ್ಲಾಪಿಲ್ಲಿ
ಚೆಲ್ಲಿ, ಕೈಕಟ್ಟಿ ಕುಳಿತ ರಿಪೇರಿಯವನಂತೆ.
ಯಾವ ತಿರುಗಣೆ ವೊಳೆಯನೆಲ್ಲಿ ಹಾಕಲಿ ? ಮತ್ತೆ ಈ
ಸುರುಳಿ ತಂತಿಯನೆಲ್ಲಿ ತುರುಕಲಿ ?
ಗಡಿಯಾರವಿದೆ, ಯಂತ್ರವಿದೆ, ಎಲ್ಲ ಇವೆ. ಇಲ್ಲ
ಸಾವಯವಶಿಲ್ಪದ ಸಮಗ್ರೀಕರಣ ಬಲ"

['ಶರದ್ಗೀತ'—ಭಾಗ ೩]

ಅಲ್ಲದೆ, ಬಾಳಿನಲ್ಲಿಯ ಅಸಹಾಯಕತೆಯನ್ನೂ, ಅದರ ಅಪೂರ್ಣತೆಯ ಪ್ರಜ್ಞೆಯನ್ನೂ ಕೆರಳಿಸುವ 'ಭೂಮಿಗೀತ'ದ ಕೊನೆಯ ಭಾಗದಲ್ಲಿ ಬರುವ ಈ ಪಂಕ್ತಿಗಳು :

"ಕೆಲರು ಹೇಳುವರು ಸ್ವಿಚ್ಚೆಲ್ಲೊ ತಿಳಿಯದೆಂದು;
ಮೂಲದ ಕಚೇರಿಯ ವಿಳಾಸ ಮರೆತಿದೆ ಎಂದು;
ಇಲ್ಲೆ ಎಲ್ಲೋ ಇರುವುದೆನ್ನುವರು ಉಳಿದವರು.
ಕತ್ತಲಲ್ಲಿ, ಕಣ್ಣು ಕಾಣದ ಬೀದಿಯಿಕ್ಕಟ್ಟಿನಲಿ
ಗೋಡೆ ತಡಕುತ ಇನ್ನು ತೆವಳಬೇಕು.
ಹೆಳವನ ಹೆಗಲಮೇಲೆ ಕುರುಡ ಕೂತಿದ್ದಾನೆ;
ದಾರಿ ಸಾಗುವದೆಂತೊ ನೋಡಬೇಕು."

"ಪೂರ್ಣತೆಯ, ಪ್ರಗತಿಯ, ಭ್ರಮೆಯನ್ನು ಹುಟ್ಟಿಸಿ ಬದುಕನ್ನು ಸರಳ ಮಾಡಿಸುವ ಕಾವ್ಯಕ್ಕಿಂತ, ಅಪೂರ್ಣತೆಯ ಪ್ರಜ್ಞೆಯನ್ನು ಉಳಿಸಿ, ನೋಯಿಸಿ, ಕುದಿಸಿ, ಬೆಳಕನ್ನು ಕಾಣಲು ಕತ್ತಲಲ್ಲೇ ತಡಕುತ್ತ ನಡೆಯಬೇಕಾದ ಅನಿವಾರ್ಯತೆಯನ್ನು ಜೀವಕ್ಕೆ ಕಲಿಸುವ ಕಾವ್ಯ ಶ್ರೇಷ್ಠವಾದುದು"[1] ಹೌದೆ ? ಈ ಬಗ್ಗೆ ನಮ್ಮಲ್ಲಿ ವಿಚಾರ-ವಿಮರ್ಶೆ ಇಂದು ಅಗತ್ಯವಾಗಿ ನಡೆಯಬೇಕಾಗಿದೆ.

ಕಣ್ಣಿಗೆ ಕಂಡೂ,ಎಲ್ಲ ವಸ್ತುವನ್ನೂ ಚುಚ್ಚುತ್ತ ಹೋಗುತ್ತಿದ್ದ ವ್ಹಿ. ಜಿ. ಭಟ್ಟರ ವಿಡಂಬನೆಗೆ ಈಗ ತಾರತಮ್ಯ ಭಾವನೆ ಒದಗಿರುವುದು ಅವರ ಕಾವ್ಯದ ಸುದೈವ-ವೆಂದೇ ಹೇಳಬಹುದು. 'ಕಿಷ್ಕಿಂದೆ'ಯಲ್ಲಿ ಅಭಿವ್ಯಕ್ತಿಗೊಂಡಿರುವ ಅವರ ಜೀವನೋತ್ಸಾಹಕ್ಕೆ ವಾತ್ಸಲ್ಯಭಾವ ಓಲಗ ಹಿಡಿದಿದೆ. 'ಊದಬತ್ತಿಯ ಪರಿಮಳ ದಂತೆ ಕಿಷ್ಕಿಂದೆಯೊಳಿದೆ ಆನಂದ' ಎಂದು ಸಂಸಾರದ ಸಾರವನ್ನು ಅವರ ಕಾವ್ಯ

೧. 'ಭೂಮಿಗೀತ'ದ ಮುನ್ನುಡಿಯಲ್ಲಿ ಯು. ಆರ್. ಅನಂತಮೂರ್ತಿ

ಕಂಡುಕೊಂಡಿದೆ. 'ಮೂಗಹತ್ತಿದೆ ಕಸಕು ಹುಳಿಯ ಕಾಯಿ'. ಅವರ ನೋಟ-ದಲ್ಲಿ ಮೂಡಿದ ಈ ಅಂತರ ಹಿಂದೆಂದೂ ಇರದ ಚೆಲುವನ್ನು ಅವರ ಕಾವ್ಯಕ್ಕೆ ತೊಡಿಸಿ, ಅವರ ಭಾವನೆಯನ್ನು ಹೀಗೆ ವಿಡಿದಿದೆ :

"ಈ ಗಾಳಿಯ ಬೆನ್ನಮೇಲೆ
ಮೂರ್ತಿಯೊಂದ ಕೆತ್ತಬೇಕು
ಅದಕೆ ಎಲ್ಲ ಸಾಧನ
ಈ ದೇಹಾ ಈ ವಿದ್ಯಾ
ಜನನ ಮರಣ ವೇದನಾ"

('ಮೂರ್ತಿ' — ಕಿಷ್ಕಿಂದೆ)

'ಕಾಲದಕರೆ'ಗೆ ಕಿವಿಗೊಟ್ಟ ಗಂಗಾಧರ ಚಿತ್ತಾಲರ ಕಾವ್ಯ 'ಮನುಕುಲದ ಹಾಡಿ'ನಲ್ಲಿ ತನ್ನ ವಿಸ್ತಾರವನ್ನೂ, ಬೆಳವಣಿಗೆಯನ್ನೂ ಕಂಡುಕೊಂಡಿದೆ. 'ಸಮುದ್ರ ಗೀತಗಳ' ತರುವಾಯ ಆ ಛಂದಸ್ಸಿನ ಚಕ್ಕಂದ-ಉಕ್ಕಂದವನ್ನು ಪುನಃ ನಾವು ಕಾಣುವದು 'ಮನುಕುಲದ ಹಾಡಿನಲ್ಲಿ'. ಇದರಲ್ಲಿಯೂ ಐದು ಸಮುದ್ರ ಗೀತಗಳಿವೆ. 'ಪೈಲು', 'ಸೂರ್ಯಗೀತ' ಗಳಲ್ಲಿ ಇವರ ಶೈಲಿಯ ಉತ್ಕಟತೆಯನ್ನೂ, ತನ್ನತನವನ್ನೂ ಕಾಣಬಹುದು. 'ಹರಿವ ನೆತ್ತರಿನ ಆವಾಜು' ಅಲ್ಲಿ ಕೇಳಿಬರುತ್ತದೆ.

"ಅಗೆದಲ್ಲೂ ಹರಡಿಹುದು ಕಡಿದಲ್ಲೂ ಚಕ್ಕೆ ಸಿಡಿಸಿಹುದು
ಈ ಜಗದ ಚೊಕ್ಕ ಜೀವಂತ ಬೇರು!"— ಇವೇ ಮೊದಲಾದ ಸಾಲುಗಳಲ್ಲಿ ಶಬ್ದರಚನೆಗೆ ಅವರು ಪಡುವ ಪರಿಶ್ರಮಕ್ಕೆ ತಕ್ಕ ಪ್ರತಿಫಲ ದೊರೆತಿದೆಯೆನ್ನಬಹುದು.

ಜಿ. ಎಸ್. ಶಿವರುದ್ರಪ್ಪನವರು ಇಂದಿನ ಮಹತ್ವದ ಕವಿಗಳಲ್ಲಿ ಒಬ್ಬರು. 'ದೀಪದ ಹೆಜ್ಜೆ' ಇವರ ಕಾವ್ಯ ಸಾಧನೆಯಲ್ಲಿ ಒಂದು ಮಹತ್ವದ ಹೆಜ್ಜೆಯಾಗಿದೆ. 'ಕಾಲವನ್ನು ಗೆಲ್ಲುವುದಕ್ಕಾಗಿ, ಅಥವಾ ಕಾಲದ ಸೆರೆಯಿಂದ ಬಿಡಿಸಿಕೊಳ್ಳುವು-ದಕ್ಕಾಗಿ' ನಡೆಯುವ ಮನುಷ್ಯ ಪ್ರಯತ್ನದ ಹಲವಾರು ಹೆಜ್ಜೆಗಳ ಪಾಡು ಇಲ್ಲಿಯ ಕವಿತೆಗಳ ವಸ್ತುವಾಗಿದೆ ಕವಿಯ ಚಿಂತನಪರತೆ, ಭಾವದ ಹರಹು ಈ ಕವಿತೆಗಳ ವ್ಯಾಪ್ತಿಯನ್ನು ಹೆಚ್ಚಿಸಿದೆ. 'ನುಗ್ಗು ಎದೆಯೊಳ ಸುಳಿಯ ತಳದಾಳಕೆ' ಎಂಬ ಶೋಧನೆ, ಸ್ವವಿಮರ್ಶೆ, ಇಲ್ಲಿ ತಕ್ಕಮಟ್ಟಿಗೆ ನಡೆದಿದೆ. ಆ ದಿಸೆಯಲ್ಲಿ ಕೆಲವು ಉತ್ತಮ ಕಾಣಿಕೆಗಳನ್ನೂ ಕವಿ ಕೊಟ್ಟಿದ್ದಾರೆ. ಛಂದಸ್ಸನ್ನೂ ಇವರು ಬೇಕಾದ

ಹಾಗೆ ಹಿಗ್ಗಿಸಿಕೊಳ್ಳಬಲ್ಲರು. ಆದರೆ ಒಂದು ಕೊರತೆಯೆಂದರೆ, ಇವರ ಕವಿತೆಗಳಿಗೆ 'ಸಾವಯವ ಶಿಲ್ಪ' ಇಲ್ಲದಿರುವದು. ವಸ್ತು ಹಾಗೂ ಛಂದಸ್ಸು, ಭಾವ ಹಾಗೂ ಭಾಷೆ ಇವುಗಳಲ್ಲಿ ಇನ್ನಷ್ಟು ಬಿಗಿ ಹೊಂದಿಕೆ ಬೇಕು ಎನಿಸುತ್ತದೆ. ಬಿಡಿಬಿಡಿಯಾಗಿ ಬರುವ ಶಬ್ದಚಿತ್ರಗಳು ಮನೋಜ್ಞವಾಗಿದ್ದರೂ, ಅವುಗಳ ಸಂಯೋಜನೆಯಲ್ಲಿ ಒಂದು ಬಗೆಯ ರಸಕ್ರಿಯೆ ನಡೆದಂತೆ ತೋರುವದಿಲ್ಲ. ಪ್ರಕೃತಿಚಿತ್ರಗಳನ್ನು ವಾತ್ಸಲ್ಯಭಾವದೊಡನೆ ಪಾಕಗೊಳಿಸಿ ಕೊಡುವಾಗ ಇವರ ಕಾವ್ಯ ತುಂಬ ಯಶಸ್ವಿಯಾಗುತ್ತದೆ :

> "ಸುತ್ತ ಗಿಡಬಳ್ಳಿಗಳ ತುಟಿಯೊಳಗೆ ಮಿಸುಗಿತ್ತು
> ಮೊದಲ ಮೊಲೆ ಹಾಲು.
> ಬಾನ ನೀಲಿಗೆ ತುಡಿವ ನೆಲದ ಬಯಕೆಯ ಬುಗ್ಗೆ
> ಹಸುರಾಗಿ ಚಿಮ್ಮಿರಲು, ಕೊಂಬೆದೊಟ್ಟಿಲ ತುಂಬ
> ಉಯ್ಯಾಲೆಯಾಡಿತ್ತು ಹಕ್ಕಿಕೊರಳು !" ('ಪ್ರಶ್ನೆ')

ಇದೇ ದೃಷ್ಟಿಯಿಂದ 'ಕಾರ್ತೀಕ'ದಲ್ಲಿಯ ನಿಸರ್ಗ ಚಿತ್ರಗಳು ಚೆಲುವಾಗಿವೆ. ಮಗುವಿನ ಬೆರಗುಗಣ್ಣು ಅದಕ್ಕೊಂದು ಆತ್ಮೀಯತೆಯ ಮೆರುಗನ್ನು ತಂದು ಕೊಡುತ್ತದೆ : 'ಯಾರು ಕೊಟ್ಟರೋ ಬಾನಿಗೊಂದು ಬಂಗಾರದ ಮೆಡಲು,' 'ಈ ಪಾರ್ಕಿನ ಮರಮರವೂ ನೂರು ಹಕ್ಕಿಯಿಂಚರದಲಿ ಗಿಲಗಂಚಿಗಳಾಗಿವೆ' ಮೊದಲಾದವನ್ನು ನೋಡಬಹುದು. ಇವರ ಕಾವ್ಯದಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಸೌಂದರ್ಯದೃಷ್ಟಿ ಮೆಟ್ಟಿನಿಂತಿದೆ. 'ಶ್ರೀರಾಮಕೃಷ್ಣ ವಚನವೇದ'ದಲ್ಲಿ ಬರುವ ಬಂಗಾಳಿ ಗೀತೆಗಳ ಕನ್ನಡ ಅನುವಾದವನ್ನು ಇವರು 'ತೀರ್ಥವಾಣಿ'ಯಲ್ಲಿ ತುಂಬ ಸೊಗಸಾಗಿ ತಂದುಕೊಟ್ಟಿದ್ದಾರೆ.

"'ದೀಪಧಾರಿ'ಯಲ್ಲಿ ಕೆಲವು ಕವಿತೆಗಳು ನವ್ಯವಾಗಿವೆ. ಆದರೆ ನವ್ಯತೆಯ ಕಡೆಗೆ ಸಾಗುವಾಗ ಕಣವಿಯವರು ಎಚ್ಚರವಹಿಸಿದ್ದು ಬಹಳ ಸಂತೋಷದ ಸಂಗತಿಯಾಗಿದೆ."[೧] "'ಮಣ್ಣಿನ ಮೆರವಣಿಗೆ'ಯಲ್ಲಿ ಭಾವಗೀತೆಯ ಸರಾಗ ಭಾವಪೂರ್ಣತೆ, ಅದರೊಂದಿಗೆ ಅನುಸ್ಯೂತವಾದ ಭಾಷೆಯಅನುರಣನ (resonance), ಅದರಲ್ಲಿಯೂ ನವ್ಯತಂತ್ರದ ಅಂಶಗಳನ್ನು ಅಳವಡಿಸಿಕೊಂಡು ಅರಳಿದ ವಸ್ತುವಿನ್ಯಾಸ — ಈ ತ್ರಿಗುಣಾತ್ಮಕ ತಥ್ಯವು 'ನವೀನ ಕವಿತಾವಿಧಾನ'ದ ಒಂದು ಆಕೃತಿಯನ್ನು ನಮ್ಮ ಮುಂದೆ ಇರಿಸಿದೆ. .........ವ್ಯಂಗ್ಯವೋ ವಿನೋದವೋ, ವೈಚಾರಿಕತೆಯೋ, ವರ್ಣನಾ ವಿಶೇಷವೋ—ಯಾವ ವಸ್ತುವಿನ್ಯಾ-

---

೧ 'ನಡೆದುಬಂದದಾರಿ' ಸಂಪುಟ ೧

ಸವೇ ಆಗಿರಲಿ, ಯಾವ ಕವನದಲ್ಲಿಯೂ ಕವಿ ಸಹೃದಯನಿಗೆ ವಂಚನೆ ಮಾಡುವ-ವಿಲ್ಲ. ತೃಪ್ತಿಪಡಿಸುವರೇ ಹೊರತು ಚಕಿತ, ಸ್ತಂಭಿತ, ಮಾಡುವದಿಲ್ಲ. ತೀರ ಪಾರದರ್ಶಕವಲ್ಲವಾದರೂ ಇವರ ಕವನಬಿಂಬ ಅಷ್ಟು ಅಪಾರದರ್ಶಕವೂ ಅಲ್ಲ. ತುಸು ಚಿನ್ನಾಟವಾಡಿದನೇಲೆ ಮರಿಗೆ ಉಣಿಸುವ ತಾಯಿಯಂತೆ ಇವರ ಕಾವ್ಯಶಕ್ತಿ ಮತ್ತು ಶೈಲಿ "[೧]

" ಅವರ ಕವನಗಳನ್ನು ಓದುತ್ತಿರುವಂತೆ ಗದ್ಯಕ್ಕೆ ಹತ್ತಿರವಾದ, ಸರಳವಾದ ಮತ್ತು ಸೂಚ್ಯವಾದ ಅವರ ಭಾಷೆ ಓದುಗರನ್ನು ಸೆಳೆಯುತ್ತದೆ. ಭಾಷೆಯ ವಿಷಯದಲ್ಲಿ ಮತ್ತು ಅದನ್ನು ನಡೆಸುವ ಲಯದ ವಿಷಯದಲ್ಲಿ ಅವರು ಹೊಸತನವನ್ನು ಚೆನ್ನಾಗಿ ಸಾಧಿಸಿದ್ದಾರೆ. ಇವರ ಕವನಗಳಲ್ಲಿಯ ಮೋಹಕ ಗುಣ ಇಂಗ್ಲೀಷಿನಲ್ಲಿ ಹೇಳುವ "negative capability". ಈ ಸಾಲುಗಳು ಅದಕ್ಕೆ ಉತ್ತಮ ಉದಾಹರಣೆಗಳು :

**" ಒಳಗು ಹೊರಗೆಲ್ಲ ಒಂದೆ ರೀತಿ**
**ಯುದ್ಧರಂಗದಲಿ ಸನ್ನದ್ಧವಾಗಿದೆ ರಥವು**
**ಎಲ್ಲಿ ಆ ಸಾರಥಿ ?...... .. ..**
**ಓ ! ಇದು ಈಗ ನಮ್ಮ ಸರತಿ. "**

[ 'ಯುಗಾದಿ' ]

ಹೇಳುವ ವಿಷಯಕ್ಕಿಂತ ಹೇಳುವ ರೀತಿಯಲ್ಲಿಯೇ ಹೆಚ್ಚು ಹಿತವಿರುವದು :

**" ಬದ್ದಿವೆ**
**ಒಡಮುರಿದೆದ್ದಿವೆ ಗಿರಿ ಗಹ್ವರ-**
**ಯುಗಯುಗಗಳ ನೋವೆ !**
**ದರಿ ಕಂದರದೊಳಗಿನ್ನೂ ಹರಿದಾಡಿದೆ ಸಂಶಯವೆ. "**

[ 'ಮಣ್ಣಿನ ಮೆರವಣಿಗೆ' ]

ಕವಿಯು ನೋಡುವಾಗ ಈ ರೀತಿಯ ರಾಸಾಯನಿಕ ಕ್ರಿಯೆ ನಡೆಯಬೇಕು. 'ಮಣ್ಣಿನಮೆರವಣಿಗೆ'ಯ ಮೂರನೆಯ ಭಾಗವು ಅರ್ಥವನ್ನು ಧ್ವನಿಸಿ ಹೇಳುವ ವಿಧಾನದಿಂದಲೂ, ಲಲಿತ ಪದಸಂಯೋಜನೆಯಿಂದಲೂ, ಸಾಲುಗಳ ನಿಧಾನವಾದ,

---

೧. ಶ್ರೀ ಗೌರೀಶ ಕಾಯ್ಕಿಣಿ — 'ಮಣ್ಣಿನ ಮೆರವಣಿಗೆ'ಯ ಹಿನ್ನುಡಿಯಲ್ಲಿ.

ಹೆಚ್ಚು ಗದ್ದಲವಿಲ್ಲದ ನಡಿಗೆಯಿಂದಲೂ ಮತ್ತು ಕೊನೆಯಲ್ಲಿ ಕಾಣುವ ಸಂಯಮ-ಪೂರ್ಣ ಜೀವನ ದೃಷ್ಟಿಯಿಂದಲೂ ಅತ್ಯಂತ ಉತ್ತಮ ಭಾಗವಾಗಿದೆ. ಒಟ್ಟಿನಲ್ಲಿ ಕಣವಿಯವರದು ಈ ರಾಗಮೇಳದಲ್ಲಿ ತನ್ನದೆ ವಿಶಿಷ್ಟತೆಯನ್ನು ಹೊಂದಿದ ಎಳೆ."[೧]

'ಬುವಿ ನೀಡಿದ ಸ್ಫೂರ್ತಿ'ಯನಂತರ ಬೇರೆ ಸಂಗ್ರಹ ಬಂದಿರದಿದ್ದರೂ, ರಾಮಚಂದ್ರಶರ್ಮರ ಹೆಸರು ಇಲ್ಲಿ ಉಲ್ಲೇಖನೀಯವಾಗಿದೆ. ಮನಸ್ಸಿನ ಆಳದಲ್ಲಿರುವ ಗುಪ್ತಕಾಮನೆಗಳನ್ನು ಅವುಗಳಿಗೆ ತಕ್ಕ ರೂಪಕ, ಚಿತ್ರ, ಸಂಕೇತ, ಸ್ಮೃತಿ-ಗಳಿಂದ ನವ್ಯತಂತ್ರದ ಸ್ವತಂತ್ರವಾದ ಛಂದಸ್ಸಿನಲ್ಲಿ ರೂಪುಗೊಳಿಸಿಕೊಡಲು ಇವರು ಪ್ರಯತ್ನಿಸಿದ್ದಾರೆ. 'ಏಳುಸುತ್ತಿನ ಕೋಟೆ', 'ಗೌರೀಶಂಕರ' ಮೊದಲಾದ ಯಶಸ್ವೀಕವಿತೆಗಳನ್ನು ಬಿಟ್ಟರೆ, ಉಳಿದವುಗಳಲ್ಲಿಯ ವಿಧಾನ ಬೇಸರ ತರುವಂತಿದೆ. ಕಾಮಜೀವನದ ವಿಕೃತಿಯೇ ಸಾಮಾನ್ಯವಾಗಿ ಇವರ ಎಲ್ಲ ಕವಿತೆಗಳ ವಸ್ತುವಾಗಿ-ರುವುದರಿಂದ ಅದರಲ್ಲಿ ವೈವಿಧ್ಯವನ್ನು ತಂದು ಬೆರಗುಗೊಳಿಸುವಂತಹ ಪ್ರತಿಭೆ ಇಲ್ಲಿ ವ್ಯಕ್ತವಾಗಿಲ್ಲ. ಹೇಳುವ ವಿಷಯ ತೀರ ಸಾಮಾನ್ಯವಾದುದೇ ಇದ್ದಾಗಲೂ ಇವರ ಅದರಲ್ಲಿ ಹೆಚ್ಚಿನ ಜಾಣ್ಮೆಯನ್ನು ತೋರ್ಪಡಿಸುವ ಹವಣಿಕೆ ಕಂಡು ಬರುತ್ತದೆ ಉದ್ದೇಶಪೂರ್ವಕವಾಗಿ, ಚಿತ್ರಕ್ಕೆ ಚಿತ್ರಗಳನ್ನು ಜೋಡಿಸಲು ಪ್ರಯತ್ನಿಸಿ ಬರೆದ ಸಾಲುಗಳೇ ಇವರ ಕವಿತೆಗಳಲ್ಲಿ ಹೆಚ್ಚಾಗಿವೆ ಇದರಿಂದ ಅಸ್ಪಷ್ಟತೆಗೆ ವಿನಾಕಾರಣ ಎಡೆಗೊಟ್ಟಂತಾಗಿದೆ.

ಎಂ. ಅಕಬರ ಅಲಿಯವರ ಕವಿತೆ ಪ್ರಗತಿಶೀಲತೆಯಿಂದ ನವ್ಯಕ್ಕೆ ಒಲಿಯುತ್ತಿ-ರುವುದನ್ನು 'ನವಚೇತನ' ಸಂಗ್ರಹದಲ್ಲಿ ಕಾಣಬಹುದು. 'ಹಾವು ಹೆಡೆಬಿಡಿಸಿದಾಗ' ಎಂಬುದು ಇಲ್ಲಿಯ ಒಂದು ಉತ್ತಮ ಕವನ. ಇವರು ಬಳಸುವ ಪ್ರತಿಮೆಗಳು ಸತ್ವಪೂರ್ಣವಾಗಿದ್ದು ಶೈಲಿ ಗಂಭೀರತೆಯನ್ನು ಕಳೆದುಕೊಳ್ಳದೆಯೂ ವಿಡಂಬನ ಸೂಚಿಯಾಗಿದೆ. ಅಮರ್ದು, ಎರ್ದೆ, ಬರ್ದಿಲ, ಮೇಣ್, ತೋಂಟ ಮೊದಲಾದ ಶಬ್ದಗಳು ಗತಕಾಲದ ಗುರುತುಗಳಂತೆ ಇವರ ಶೈಲಿಯಲ್ಲಿ ಇನ್ನೂ ಉಳಿದುಕೊಂಡಿವೆ. ಇವರ ಕಾವ್ಯದ ಪ್ರಗತಿ ನಿಧಾನವಾಗಿದ್ದರೂ ಭರವಸೆಯನ್ನು ಹುಟ್ಟಿಸುವಂತಹದು.

ಭುಜೇಂದ್ರ ಮಹಿಷವಾಡಿಯವರ 'ಕಟ್ಟುವಕ್ಕೈ'ಯಲ್ಲಿ ಕಾವ್ಯಗುಣ ತೂಕಡಿಸ-ದಂತೆ ನೋಡಿಕೊಳ್ಳಬೇಕಾದುದು ಅಗತ್ಯವೆನಿಸುತ್ತದೆ. 'ಚೈತ್ರಾಗಮನ'ದಲ್ಲಿ

---

೧. ಡಿ. ಕೆ. ಸೀತಾರಾಮಶಾಸ್ತ್ರಿ — 'ಕನ್ನಡದಲ್ಲಿ ನವ್ಯಕವಿತೆ' — 'ಜಯಕರ್ನಾಟಕ' ಆಗಸ್ಟ ೧೯೫೮

ಬಹುಪಟ್ಟಿದ ಅವರು ಸಹಜವಾದ ಕಾವ್ಯಶಕ್ತಿಯನ್ನು ತೋರ್ಪಡಿಸಿದ್ದರೂ, ಅದಿನ್ನೂ ಬಲಿತು ಬಲಗೊಳ್ಳಬೇಕಾಗಿದೆ 'ದೀಪಾವತಾರ'ದ ಛಂದಸ್ಸಿನಲ್ಲಿ ಸಿದ್ದಣ್ಣ ಮಸಳಿಯವರು ತಮ್ಮ ಮೊದಲಿನ ಸಂಕಲನಕ್ಕಿಂತ ಕೆಲಮಟ್ಟಿನ ಪ್ರಗತಿಯನ್ನು ತೋರಿಸಿದ್ದಾರೆ. ಆದರೆ, ಅನ್ಯಕವಿಗಳ ಪ್ರತಿಭೆಯಲ್ಲಿ ಮಿಂದು ಬಂದ ಉಕ್ತಿ ವಿಶೇಷಗಳನ್ನು ಇವರು ಅರಿತೋ, ಅರಿಯದೆಯೋ ತಮ್ಮವೆಂಬಂತೆ ಕವಿತೆಗಳಲ್ಲಿ ಉಪಯೋಗಿಸಿಬಿಡುತ್ತಾರೆ. ಈ ಅಪಾಯಕರವಾದ ಹಾದಿಯಿಂದ ಅವರ ಕಾವ್ಯ ಬೇಗ ಪಾರಾದಷ್ಟೂ ಒಳ್ಳೆಯದು. 'ನೆಲಸಂಪಿಗ'ಯಲ್ಲಿ ಬಿ. ಎ. ಸನದಿಯವರು ವ್ಯಕ್ತಪಡಿಸಿರುವ ಮಾತಿನ ಜಾ ತನ ತನ್ನ ವಾಚ್ಯತೆಯನ್ನು ಹೋಗಲಾಡಿಸಿಕೊಂಡಾಗ ಹೃದ್ಯವಾಗಬಹುದು. 'ಜೀವತೀರ್ಥ'ದಲ್ಲಿ ಕೋ. ಚೆನ್ನಬಸಪ್ಪನವರು ತಮ್ಮ ಸಾಮರ್ಥ್ಯದ ಎಲ್ಲೆಯನ್ನು ಗುರುತಿಸಿಕೊಂಡಿದ್ದಾರೆ. ರೋಮ್ಯಾಂಟಿಕ್ ಹಾಗೂ ನವ್ಯಕಾವ್ಯ ಎರಡರಿಂದಲೂ ಕಾವ್ಯದ ಸೌಂದರ್ಯಕ್ಕೆ ಬೇಕಾಗುವ ಒಳ್ಳೆಯ ಅಂಶಗಳನ್ನು ಸ್ವೀಕರಿಸುವ ಹವ್ಯಾಸವುಳ್ಳ ಸಿ. ಪಿ ಕೆ ಅವರ 'ತಾರಾಸಖ' ಆಯಾ ಕವಿಗಳ ಪ್ರಭಾವದಿಂದ ಮುಕ್ತವಾಗಿರದಿದ್ದರೂ ಆಶಾದಾಯಕವಾಗಿದೆ 'ಚಿನ್ಮಯಿ'ಯಿಂದ ಬೆಳಕಿಗೆ ಬಂದ ದೇವೇಂದ್ರಕುಮಾರ ಹಕಾರಿ' 'ಸುಗ್ಗಿಯ ಕಣ'ವನ್ನು ಕೊಟ್ಟ ವಿರೂಪಾಕ್ಷ, 'ಮಧುಸಂಚಯ'ದ 'ಜೀ. ವಿ.', 'ರುದ್ರಾಕ್ಷಿ'ಯ ರಾಜಶೇಖರ, 'ಕಾವ್ಯಕಾವೇರಿ'ಯ ಎಲ್. ಜಿ. ಸುಮಿತ್ರ ಇವರ ಕಾವ್ಯದ ಬೆಳವಣಿಗೆಯನ್ನು ಕಾದು ನೋಡಬೇಕಾಗಿದೆ.

ನವೀನ ಪ್ರಜ್ಞೆಯಿಂದ ಜಾಗ್ರತರಾಗಿರುವ ಹೊಸ ಪೀಳಿಗೆಯ ಕವಿಗಳಲ್ಲಿ ಕೆಲವರು ವಿಶೇಷವಾದ ಕುತೂಹಲವನ್ನು ಹುಟ್ಟಿಸಿದ್ದಾರೆ. 'ಮನಸು ಗಾಂಧಿಬಜಾರು'ದಲ್ಲಿ ನಿಸಾರ್ ಅಹಮದ್ ಅವರು ಭಾವಪೂರ್ಣತೆಯಿಂದಲೇ ತಾವು ಕಟ್ಟುವ ಚಿತ್ರಗಳಲ್ಲಿ, ಪ್ರತೀಕಗಳಲ್ಲಿ ನವೀನತೆಯ ಸೊಗಸನ್ನು ತಂದಿದ್ದಾರೆ. 'ಮುಗುಳು' ಸಂಗ್ರಹದಿಂದ ಧೈರ್ಯವಾಗಿ ಮುಂದುವರಿಯುತ್ತಿರುವ ಚಂದ್ರಶೇಖರ ಕಂಬಾರ ಈಚಿನ ಕವಿತೆಗಳಲ್ಲಿ ಸಾಧಿಸಿರುವ ಪ್ರಗತಿ ಗಮನಾರ್ಹವಾಗಿದೆ. 'ಬಾನುಲಿ'ಯಿಂದ ಪ್ರಕಾಶಗೊಂಡ ಚಂದ್ರಶೇಖರ ಪಾಟೀಲರ ಕಾವ್ಯರಚನೆ ವೈಚಾರಿಕತೆಯನ್ನೂ, ವಿಡಂಬನೆಯಲ್ಲಿ ವಿವೇಕವನ್ನೂ ಬೆಳೆಸಿಕೊಂಡಷ್ಟೂ ಶಕ್ತಿಪೂರ್ಣವಾಗಬಲ್ಲುದು. ಜಿ. ಎಸ್. ಸಿದ್ಧಲಿಂಗಯ್ಯ ಮತ್ತು ಹೆಚ್. ಜಿ. ಸಣ್ಣಗುಡ್ಡಯ್ಯ ಇವರು ತಮ್ಮ 'ರಸಗಂಗೆ' ಹಾಗೂ 'ಅಭೀಪ್ಸೆ'ಗಳಲ್ಲಿ ದಿಟ್ಟತನದ ಹೆಜ್ಜೆಯಿಟ್ಟಿದ್ದಾರೆ. ಇವರು 'ತಮ್ಮ ಸ್ವಂತ ಅನುಭವದ ಗುಪ್ತನಿಧಿಯ ಕಡೆಗೆ ಕೈಚಾಚುತ್ತಿರುವದು ಶುಭಲಕ್ಷಣ' (ಅಡಿಗ)ವೆನಿಸಿದರೂ ಅದನ್ನು ಕಲಾಸಂಯಮ-

ದಿಂದ ನಿರೂಪಿಸುವುದರ ಕಡೆಗೆ ಹೆಚ್ಚು ಲಕ್ಷ್ಯವೀಯಬೇಕಾದುದು ಅಗತ್ಯ ಗಿರಡ್ಡಿ ಗೋವಿಂದರಾಜರ 'ರಸವಂತಿ' ರಸಸಂಪ್ರದಾಯದ ಕೆಲವು ಒಳ್ಳೆಯ ಗುಣ-ಗಳನ್ನು ವೈಗೂಡಿಸಿಕೊಂಡು ತನ್ನ ಹಾದಿಯನ್ನು ರೂಪಿಸಿಕೊಳ್ಳುವಂತೆ ತೋರುತ್ತದೆ.

ಇದೂ ಅಲ್ಲದೆ, ಅಡಿಗರ ಸಂಪಾದಕತ್ವದಲ್ಲಿ ಪ್ರಕಟವಾಗಿರುವ 'ಸಾಕ್ಷಿ'ಯ ಪ್ರಥಮ ಸಂಪುಟದ ಕವಿಗಳಾದ ಎ. ಕೆ. ರಾಮಾನುಜನ್, ಎಸ್. ಚೆನ್ನಯ್ಯ, ಪೂ. ಚಂ. ತೇ. ಕೀರ್ತಿನಾಥ, ಸಮತೀಂದ್ರ ನಾಡಿಗ, ಪಿ. ಲಂಕೇಶಪ್ಪ ಮೊದಲಾ-ದವರನ್ನೂ, ಅರವಿಂದ ನಾಡಕರ್ಣಿ ಹಾಗೂ ಶಂಕರ ಮೊಖಾಶಿಯವರನ್ನೂ ಇಲ್ಲಿ ಎತ್ತಿ ಹೇಳಬಹುದಾಗಿದೆ

ಕನ್ನಡದಲ್ಲಿ ಈಚೆಗೆ ನಡೆದಿರುವ ಕಾವ್ಯರಚನೆಯ ವೈವಿಧ್ಯ, ಅದರಲ್ಲಿ ಹೊಸ ಬದುಕು ಆವಿಷ್ಕಾರಗೊಳ್ಳುತ್ತಿರುವ ರೀತಿ, ಆಯಾ ಮಾರ್ಗದ ಕಾವ್ಯರಚನೆ-ಯಲ್ಲಿಯ ಗುಣದೋಷ, ಜೊತೆಯಲ್ಲಿ ವೈಯಕ್ತಿಕವಾಗಿ ಆಯಾಕವಿಯ ಗತಿ-ಪ್ರಗತಿ-ಇವುಗಳ ಪರಿಚಯವನ್ನೂ ಸ್ವಲ್ಪಮಟ್ಟಿಗಾದರೂ ರಸಿಕರಿಗೆ ಉಂಟುಮಾಡಿ ಕೊಡುವದೇ ಈ ಪರಿಶೀಲನೆಯ ಉದ್ದೇಶವಾಗಿದೆ. ಮೇಲಿನ ವಿವೇಚನೆಯಲ್ಲಿ ಎಲ್ಲಿಯಾದರೂ ಒಂದು ಮಾತು ಹೆಚ್ಚು ಇಲ್ಲವೆ ಕಡಮೆ ಎನಿಸಿದ್ದರೆ ಸಹೃದಯರು ಮನ್ನಿಸಬೇಕಾಗಿ ಕೋರುತ್ತೇನೆ. 'ಹೊನ್ನತೂಗಿದ ತ್ರಾಸು ಕಟ್ಟಳೆ ಹೊನ್ನಿಂಗೆ ಸರಿಯಪ್ಪುದೆ?' ಎಂಬ ಮಾತು ನನ್ನ ಧ್ಯಾನದಲ್ಲಿಯೂ ಇದೆ. ಆದುದರಿಂದ ಮೂಲ ಕಾವ್ಯವನ್ನೋದಿ ಪಡೆಯುವ ಸಂಸ್ಕಾರವೇ ಮಿಗಿಲಾದದ್ದು. ಹಾಗೆ ಓದಿ ರಸಗ್ರಹಣ ಪಡೆಯಲು ಈ ಸಮಾಲೋಕನೆಯಿಂದ ಕಿಂಚಿತ್ತಾದರೂ ನೆರವಾಗ-ಬಹುದೆಂದು ಆಶಿಸಿದ್ದೇನೆ. ಕಾವ್ಯವನ್ನು ಓದುವದು ಯಾವಾಗಲೂ ಒಳ್ಳೆಯದು. ಅದರಲ್ಲೂ, ನಮ್ಮ ಸ್ವಂತ ಬದುಕನ್ನೇ ಕಡೆದು ತೆಗೆದ ಕಾವ್ಯವನ್ನು ಸಮಕಾಲೀನ ಕಾವ್ಯವನ್ನು - ಓದುವದು ಇನ್ನೂ ಹೆಚ್ಚು ಒಳ್ಳೆಯದು.[೧]

---

೧. " A good poem is a contribution to reality. The world is never the same once a good poem has been added to it. A good poem helps to change the shape and significance of the universe, helps to extend every one's knowledge of himself and the world around him. " — Dylon Thomas

ಕವಿತೆಯನ್ನು ಬರೆಯುವದು ಬಹು ಸುಲಭ ಎಂದು ನಮ್ಮಲ್ಲಿ ಅನೇಕರ ಭಾವನೆಯಾಗಿದೆ. ನಿಜವಾದ ಒಳ್ಳೆಯ ಕವಿತೆಯನ್ನು ಬರೆಯುವದು ಅಷ್ಟು ಸುಲಭವಲ್ಲ. ("Poetry is an art, not a dumping ground for emotion") ಕವಿಯ ಅಖಂಡ ಜೀವನಾನುಭವದ ಪ್ರತೀಕವಾಗಿ ಬರುವ ಕವಿತೆ ಅದೊಂದು ಸರ್ವೋತ್ಕೃಷ್ಟವಾದ ಕಲೆಯೂ ಅಹುದು. ಆದುದರಿಂದ ಅದನ್ನು ಸರ್ವಾಂಗ ಪರಿಪೂರ್ಣವಾಗಿ, ಸಂಪುಷ್ಟವಾಗಿ ರೂಪಿಸುವಲ್ಲಿ ಕವಿಯು ಮರಹು, ಆಲಸ್ಯಗಳಿಗೆ ಎಡೆಗೊಡದೆ, ಸತತವಾದ ಪರಿಶ್ರಮದಿಂದಲೂ, ಚಿತ್ತೈಕಾಗ್ರತೆಯಿಂದಲೂ, ಕಲಾಸಂಯಮದಿಂದಲೂ ಸಾಧಿಸಬೇಕಾಗುತ್ತದೆ. "ಘನತರ ಚಿತ್ರದ ರೂಹ ಬರೆಯಬಹುದಲ್ಲದೆ, ಪ್ರಾಣವ ಬರೆಯಬಹುದೆ? ಅಯ್ಯ" ಎಂದು ಅಲ್ಲಮಪ್ರಭು ಕೇಳಿದ್ದಾರೆ ಒಂದೆಡೆ. ಪ್ರಾಣವನ್ನೂ ಬರೆಯಬಲ್ಲ ಶಕ್ತಿ ಕಾವ್ಯಕ್ಕಿದೆ. ಅಂಥ ಕಾವ್ಯವನ್ನೂ ಕನ್ನಡ ಮರೆಯಲಿಕ್ಕಿಲ್ಲವಷ್ಟೆ?

---

